



# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*



Vol-14 December - 2016 Issue No. 12 ₹ 10/-





His Excellency Sri Pranab Mukherjee, President of India Presented Rashtrapati Award to Scout, Guide, Rover & Ranger of Karnataka State on 5th December 2016 at Rashtrapathi Bhavan, New Delhi



Siddaramiah, Hon'ble Chief Minister of rnataka, Sri H.K. Patil, Hon'ble Minister for RDPR d Sri P.G.R. Sindhia, Former Minister & State Chief mmissioner, BS&G, Karnataka briefing Pranab Mukherjee, Hon'ble President of India out the 17th National Jamboree sheduled to be d at Mysuru from 29th December 2016.



Sri B.I. Nagarale, I.A.S. (Retd.), Chief National Commissioner, Sri M.A. Khalid, International Commissioner (S), Sri P.G.R. Sindhia, State Chief Commissioner, Sri Kondajji B. Shanmukhappa, Vice-President and Sri K. Sukumara, Director of BS&G Called on Dr. Subhash C. Khuntia, Chief Secretary, Govt. of Karnataka for briefing about the 17th National Jamboree sheduled to be at Mysuru from 29th December 2016.

## His Excellency Sri Pranab Mukherjee, President of India Presented National Awards on 5th December 2016 at Rashtrapathi Bhavan, New Delhi



**Sri Siddaramaiah**
Hon'ble Chief Minister of Karnataka
Silver Elephant Awardee



**Dr. Go.Ru. Channabasappa**
Chairman, Publication Commitee
Silver Elephant



**Smt. Saroja V. Naidu**
Vice-President, BS&G, Karnataka
Silver Elephant



**Smt. S.K. Prabha**
Joint State Secretary(G)
Bar to Silver Star



**Smt. Hema Vijaya Kumar**
Leader Trainer (Cub)
Bar to Silver Star



**Sri M.K. Khan**
D.C.C., Bengaluru South
Bar to Silver Star



**Sri N. Srinivasan**
Headquarters Commissioner(Trg.)
Silver Star



**Sri M. Revanasiddappa**
D.D.P.I. & D.C.C., Chitradurga
Silver Star



**Sri. G.B. Mannikeri**
D.D.P.I & D.C(S), Chikkodi
Silver Star



**Sri Abdul Jameel**
District Secretary, Mysuru
Silver Star



**Smt. Prabha Londe**
District Secretary, Dharwad
Silver Star



**Dr. K.B. Gurumurthy**
District Treasurer, Mysuru
Silver Star

ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

Monthly News Magazine


**ಸಮಸ್ತರಿಗೆ ಕ್ರಿಸ್‌ಮಸ್ ಹಬ್ಬದ, ನೂತನ ವರ್ಷದ ಹಾಗೂ ಸಂಕ್ರಾಂತಿ ಹಬ್ಬದ ಹಾರ್ಧಿಕ ಶುಭಾಶಯಗಳು**



**ಪರಿವಿಡಿ**




ಸಂಚಿಕೆಯ ವಾರ್ಷಿಕ ಚಂದಾ ರೂ. 100 / -
ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ
ವಾರ್ಷಿಕ ಚಂದಾ ರೂ. 100 / - ಚಂದಾಹಣವನ್ನು
ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ # 39
ಅರಮನೆ ರಸ್ತೆ, ಬೆಂಗಳೂರು-560 001
ದೂ: 080-2226 0017, 2226 7470
ಇಲ್ಲಿಗೆ ಕಳುಹಿಸಲು ಕೋರಿದೆ.

ನಮ್ಮ ಸಂಸ್ಥೆಯ ವೆಬ್‌ಸೈಟ್:
www.bsgkarnataka.org
www.kondajjibasappa.org
www.kondajjibasappa.com

ನಮ್ಮ ಸಂಸ್ಥೆಯ ಫೇಸ್‌ಬುಕ್
The Bharat Scouts-Guides Karnataka




# ರಾಜ್ಯ ಮುಖ್ಯ ಆಯುಕ್ತರ ನುಡಿ



**ಪ್ರಿಯ ಓದುಗ ಬಂಧುಗಳೇ**

**ಸಸ್ನೇಹ ನಮಸ್ಕಾರಗಳು**

ಬಹಳ ದಿನಗಳಿಂದ ನಾವುಗಳು ಕಾಯುತ್ತಿದ್ದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಹದಿನೇಳನೆಯ ರಾಷ್ಟ್ರೀಯ ಜಾಂಬೂರಿಯ ಕ್ಷಣಗಣನೆ ಆರಂಭವಾಗಿದೆ. ಬಹುಶ: ಈ ಸಂಚಿಕೆ ನಿಮ್ಮ ಕೈ ತಲುಪುವ ವೇಳೆಗೆ ಜಾಂಬೂರಿಯು ಆರಂಭವಾಗಿರುತ್ತದೆ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ಸಂಸ್ಥೆಯು ಈ ಮಹಾ ಅಧಿವೇಶನವನ್ನು ಸಂಘಟಿಸುವ ಹಿರಿಯ ಜವಾಬ್ದಾರಿಯನ್ನು ಅತ್ಯಂತ ಯಶಸ್ವಿಯಾಗಿ ನಿರ್ವಹಿಸುವುದು ಎಂಬ ನಂಬಿಕೆ ನನಗಿದೆ. ಯಾವುದಾದರೂ ಕಾರ್ಯದಲ್ಲಿ ಅಂತಿಮ ಗೆಲುವು ಯಾವ ರೀತಿ ಇರುತ್ತದೆ ಎಂಬುದಕ್ಕೆ ಪೂರ್ವಸಿದ್ಧತೆಯೇ ಸಾಕ್ಷಿಯಾಗಿರುತ್ತದೆ. ಈ ದೃಷ್ಟಿಯಿಂದ ವಿಶ್ಲೇಷಿಸಿದರೆ ಸಿದ್ಧತೆಯಲ್ಲಿ ನಾವೆಲ್ಲರೂ ಸಮಗ್ರವಾಗಿ ಒಳಗೊಂಡಿರುವುದು ಮತ್ತು ಜಾಂಬೂರಿಯ ಯಶಸ್ಸಿಗೆ ಮನ:ಪೂರ್ವಕವಾಗಿ ಕೆಲಸ ಮಾಡುತ್ತಿರುವುದು ನನಗೆ ಕಂಡುಬರುತ್ತದೆ. ಜಾಂಬೂರಿಯು ಮುಗಿದು ಕಟ್ಟಕಡೆಯ ಪ್ರತಿನಿಧಿ ತನ್ನೂರಿಗೆ ಹಿಂತಿರುಗುವವರೆಗೆ ನಾವು ವಿರಮಿಸುವಂತಿಲ್ಲ. ನಿಮ್ಮೆಲ್ಲರ ಸಹಕಾರವು ನನಗೆ ಅತೀವ ಸಂತೋಷವನ್ನುಂಟುಮಾಡಿದೆ. ಜಾಂಬೂರಿಯ ಯಶಸ್ಸು ನಮ್ಮಲ್ಲಿ ಪ್ರತಿಯೊಬ್ಬರದೂ ಆಗಿದೆ.

ಅಧಿಕೃತವಾಗಿ ಜಾಂಬೂರಿಯು 29ನೇ ಡಿಸೆಂಬರ್ ಮಧ್ಯಾಹ್ನ 3.15ಕ್ಕೆ ಭಾರತದ ಘನವೆತ್ತ ರಾಷ್ಟ್ರಾಧ್ಯಕ್ಷರಾದ ಶ್ರೀ ಪ್ರಣಬ್ ಮುಖರ್ಜಿ ಅವರಿಂದ ಉದ್ಘಾಟನೆಯಾಗುತ್ತದೆ. ಕರ್ನಾಟಕದ ಘನವೆತ್ತ ರಾಜ್ಯಪಾಲರಾದ ಶ್ರೀ ವಾಜುಬಾಯಿ ರೂಢಾಬಾಯಿ ವಾಲಾ ಅವರು ಮುಖ್ಯ ಅತಿಥಿಗಳಾಗಿ ಆಗಮಿಸುತ್ತಾರೆ ಮತ್ತು ಸನ್ಮಾನ್ಯ ಶ್ರೀ ಸಿದ್ದರಾಮಯ್ಯ, ಕರ್ನಾಟಕದ ಮಾನ್ಯ ಮುಖ್ಯಮಂತ್ರಿಗಳು ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸುತ್ತಾರೆ. ಕೇಂದ್ರ ಸರ್ಕಾರದ ಮಾನ್ಯ ಮಂತ್ರಿಗಳಾದ ಶ್ರೀ ಅನಂತ ಕುಮಾರ್ ಮತ್ತು ಶ್ರೀ ವಿಜಯ್ ಗೋಯಲ್‌ರವರು ಹಾಗೂ ಕರ್ನಾಟಕದ ಮಾನ್ಯ ಮಂತ್ರಿಗಳಾದ ಡಾ॥ ಎಚ್.ಸಿ.ಮಹದೇವಪ್ಪ ಮತ್ತು ಶ್ರೀ ತನ್ವೀರ್ ಸೇಠ್‌ರವರು ಭಾಗವಹಿಸುತ್ತಾರೆ. ಕರ್ನಾಟಕದಲ್ಲಿ ಸ್ಕೌಟ್ಸ್ ಚಳವಳಿಯನ್ನು ಆರಂಭಿಸಿ, ಪ್ರವರ್ಧಮಾನಕ್ಕೆ ಬರಲು ಕಾರಣರಾದ ಮೈಸೂರು ರಾಜರ ವಂಶಸ್ಥರಾದ ಡಾ॥ ಪ್ರಮೋದ ದೇವಿ ಒಡೆಯರ್ ಅವರು ಆಗಮಿಸಲಿದ್ದಾರೆ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಭಾರತದ ಅಧ್ಯಕ್ಷರಾದ ಡಾ॥ ಅನಿಲ್ ಕುಮಾರ್ ಜೈನ್, ಮುಖ್ಯ ರಾಷ್ಟ್ರೀಯ ಆಯುಕ್ತರಾದ ಶ್ರೀ ಬಿ.ಐ.ನಾಗರಾಳೆ ಮತ್ತು ಇತರ ಪದಾಧಿಕಾರಿಗಳು ಭಾಗವಹಿಸುತ್ತಾರೆ.

ಜಾಂಬೂರಿಯ ಚಟುವಟಿಕೆ, ದಿನಾಂಕ 28 ಡಿಸೆಂಬರ್ 2016ರಂದೇ "ಕಬ್ ಮತ್ತು ಬುಲ್‌ಬುಲ್ ಉತ್ಸವ"ದೊಂದಿಗೆ, ಕಬ್ಸ್ ಚಳವಳಿಯ ಶತಮಾನೋತ್ಸವ ಆಚರಣೆಯೊಂದಿಗೆ ಆರಂಭವಾಗುತ್ತದೆ. 28 ಡಿಸೆಂಬರ್ 2016 ರಿಂದ 4 ಜನವರಿ 2017ರತನಕ 31 ಕಾರ್ಯಕ್ರಮಗಳನ್ನು ಆಯೋಜಿಸಲಾಗಿದೆ. ಕಬ್ಸ್, ಬುಲ್‌ಬುಲ್ ಉತ್ಸವ, ಸ್ಥಳೀಯ ಪ್ರತಿಭಾ ಪ್ರದರ್ಶನ, ಸ್ಕೌಟ್ ಗೈಡ್ಸ್ ಪ್ರದರ್ಶನ, ಸ್ಥಾಪಕ ಸದಸ್ಯರ ಸನ್ಮಾನ, ಕರ್ನಾಟಕ ದಿನಾಚರಣೆ, ಬ್ಯಾಂಡ್ ಪ್ರದರ್ಶನ ಸ್ಪರ್ಧೆ, ಸಾಹಸ ಕ್ರೀಡೆಗಳ ಸ್ಪರ್ಧೆ, ಪಥಸಂಚಲನ, ಮೈಸೂರು ದರ್ಶನ, ವಸ್ತುಪ್ರದರ್ಶನ, ಕಬ್ ಮತ್ತು ಬುಲ್ ಬುಲ್ ಉತ್ಸವದ ಸಮಾರೋಪ, ಜಾನಪದ ಹಬ್ಬ, ರೈತ ದರ್ಶನ, ಭಾರತ ದರ್ಶನ, ಹೊಸ ವರ್ಷದ ಆಚರಣೆ, ಅಂತರ ರಾಷ್ಟ್ರೀಯ

ಪ್ರತಿನಿಧಿಗಳಿಂದ ಕಾರ್ಯಕ್ರಮ, ದೈಹಿಕ ವ್ಯಾಯಾಮಗಳ ಪ್ರದರ್ಶನ, ವಿಶ್ವದಸುತ್ತ, ಮುಕ್ತಘಟಕಗಳ ರ‍್ಯಾಲಿ, ಯೋಗ ದಿನಾಚರಣೆ, ಪಥಸಂಚಲನ ಸ್ಪರ್ಧೆ, ರಾಷ್ಟ್ರೀಯ ಶೈಕ್ಷಣಿಕ ನಾಯಕರ ಸಭೆ, ರಸಪ್ರಶ್ನೆ ಸ್ಪರ್ಧೆ, ಆಹಾರ ಮೇಳ, ಭವ್ಯ ಶಿಬಿರಾಗ್ನಿ, ಸರ್ವಧರ್ಮ ಪ್ರಾರ್ಥನೆ, ಧ್ವಜ ವಂದನೆ ಇತ್ಯಾದಿ ಕಾರ್ಯಕ್ರಮಗಳು 4 ಜನವರಿ 2017ರವರೆಗೂ ಸತತವಾಗಿ ನಡೆಯುತ್ತವೆ.

ದಿನಾಂಕ 3 ಜನವರಿ 2017ರಂದು, ಮಧ್ಯಾಹ್ನ 2.45ಕ್ಕೆ ನಡೆಯುವ ಜಾಂಬೂರಿಯ ಸಮಾರೋಪ ಸಮಾರಂಭದಲ್ಲಿ ಭಾರತದ ಮಾಜಿ ಪ್ರಧಾನ ಮಂತ್ರಿಗಳಾದ ಸನ್ಮಾನ್ಯ ಶ್ರೀ ಎಚ್.ಡಿ.ದೇವೇಗೌಡರವರು ಮುಖ್ಯ ಅತಿಥಿಗಳಾಗಿ ಆಗಮಿಸುತ್ತಾರೆ. ಕರ್ನಾಟಕದ ಸನ್ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀ ಸಿದ್ದರಾಮಯ್ಯರವರು ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸುತ್ತಾರೆ. ಕೇಂದ್ರ ಸರ್ಕಾರದ ಮಾನ್ಯ ಮಂತ್ರಿಗಳಾದ ಶ್ರೀ ಡಿ.ವಿ.ಸದಾನಂದ ಗೌಡ, ಶ್ರೀ ರಮೇಶ್ ಜಿಗಜಿಣಗಿ ಮತ್ತು ಲೋಕಸಭೆಯಲ್ಲಿ ವಿರೋಧ ಪಕ್ಷದ ನಾಯಕರಾದ ಶ್ರೀ ಮಲ್ಲಿಕಾರ್ಜುನ ಖರ್ಗೆ, ಕರ್ನಾಟಕ ಸರ್ಕಾರದ ಮಾನ್ಯ ಮಂತ್ರಿಗಳಾದ ಶ್ರೀ ಡಿ.ಕೆ.ಶಿವಕುಮಾರ್, ಶ್ರೀ ಕೆ.ಜೆ.ಜಾರ್ಜ್, ಡಾ॥ ಎಚ್.ಸಿ. ಮಹದೇವಪ್ಪ, ಶ್ರೀ ಎಚ್.ಎಸ್.ಮಹದೇವ ಪ್ರಸಾದ್, ಶ್ರೀ ಯು.ಟಿ.ಖಾದರ್ ಅವರುಗಳು ಭಾಗವಹಿಸುತ್ತಾರೆ. ಮಧ್ಯಪ್ರದೇಶದ ಮಾಜಿ ಮುಖ್ಯ ಮಂತ್ರಿಗಳಾದ ಶ್ರೀ ದಿಗ್ವಿಜಯ್ ಸಿಂಗ್ ಹಾಗೂ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಗಳಾದ ಡಾ॥ ಚೆಲ್ಲಕುಮಾರ್ ಅವರು ಭಾಗವಹಿಸುತ್ತಾರೆ.

ಸನ್ಮಾನ್ಯ ಶ್ರೀ ಬಿ.ಎಸ್.ಯಡಿಯೂರಪ್ಪ, ಅಧ್ಯಕ್ಷರು, ಭಾರತೀಯ ಜನತಾ ಪಕ್ಷ, ಕರ್ನಾಟಕ, ಸನ್ಮಾನ್ಯ ಜಗದೀಶ್ ಶೆಟ್ಟರ್, ಮಾನ್ಯ ವಿರೋಧ ಪಕ್ಷದ ನಾಯಕರು, ಕರ್ನಾಟಕ, ಸನ್ಮಾನ್ಯ ಕುಮಾರಸ್ವಾಮಿ, ಅಧ್ಯಕ್ಷರು, ಜನತಾದಳ, ಕರ್ನಾಟಕ, ಅವರುಗಳು ಕಾರ್ಯಕ್ರಮಗಳಲ್ಲಿ ಭಾಗವಹಿಸಲಿದ್ದಾರೆ.

ಕರ್ನಾಟಕ ಸರ್ಕಾರ, ವಿಶೇಷವಾಗಿ ಸನ್ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀ ಸಿದ್ದರಾಮಯ್ಯರವರು ಹದಿನೇಳನೆ ರಾಷ್ಟ್ರೀಯ ಜಾಂಬೂರಿಯ ಆಯೋಜನೆಯಲ್ಲಿ ವೈಯಕ್ತಿಕವಾಗಿ ತೊಡಗಿಸಿಕೊಂಡಿದ್ದಾರೆ. ಕರ್ನಾಟಕದಲ್ಲಿ ಜಾಂಬೂರಿಯನ್ನು ನಡೆಸಬೇಕೆಂಬ ಕನಸನ್ನು ಹೊತ್ತು ಮಾನ್ಯ ಮುಖ್ಯ ಮಂತ್ರಿಗಳನ್ನು ಕಂಡಾಗ ಬಹಳ ಸಂತೋಷದಿಂದ ಒಪ್ಪಿಕೊಂಡರು. ಜಾಂಬೂರಿಗೆ ಅಗತ್ಯವಾದ ಎಲ್ಲಾ ರೀತಿಯ ಸಹಕಾರವನ್ನು ನೀಡುವುದಾಗಿ ಆಶ್ವಾಸನೆಯನ್ನು ನೀಡಿದರು. ಅಗತ್ಯವಾದ ಆರ್ಥಿಕ ಬೆಂಬಲವನ್ನು ಅವರು ನೀಡಿದ್ದಾರೆ. ಜಾಂಬೂರಿ ನಗರವನ್ನು ಸಜ್ಜುಗೊಳಿಸಲು ಅವಶ್ಯಕವಾದ ಅಧೋರಚನೆಗಳನ್ನು ಒದಗಿಸಿಕೊಟ್ಟಿದ್ದಾರೆ. ಸರ್ಕಾರದ ಸಂಪೂರ್ಣ ಬೆಂಬಲ ಮತ್ತು ಸಹಕಾರವನ್ನು ಒದಗಿಸಿಕೊಟ್ಟಿದ್ದಾರೆ. ಅವರ ಈ ಆಸಕ್ತಿಯಿಂದಲೇ ನಾವು ಜಾಂಬೂರಿಯನ್ನು ನಡೆಸಲು ಸಾಧ್ಯವಾಗಿದೆ. ಅವರನ್ನು ಭೇಟಿ ಮಾಡಲು ಹೋದಾಗಲೆಲ್ಲಾ ಅಗತ್ಯವಾದ ಸಮಯಾವಕಾಶವನ್ನು ನೀಡಿ, ಸಿದ್ಧತೆಯ ಪ್ರಗತಿಯನ್ನು ಪರಿಶೀಲಿಸಿ ಬಹು ಉಪಯುಕ್ತವಾದ ಸಲಹೆಗಳನ್ನು ನೀಡಿದ್ದಾರೆ. ಕರ್ನಾಟಕದಲ್ಲಿ ಸ್ಕೌಟ್ ಚಳವಳಿಯನ್ನು ಭದ್ರ ಮಾಡಲು ಮತ್ತು ವಿಸ್ತರಿಸಲು ಸನ್ಮಾನ್ಯ ಮುಖ್ಯ ಮಂತ್ರಿಯವರ ಒಳಗೊಳ್ಳುವಿಕೆ ಬಹಳ ಮೌಲಿಕವಾದುದು. ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಪರವಾಗಿ ಮತ್ತು ವೈಯಕ್ತಿಕವಾಗಿ ನಾನು ಅವರಿಗೆ ತುಂಬಾ ಆಭಾರಿಯಾಗಿದ್ದೇನೆ.

ಮೈಸೂರು ಜಿಲ್ಲೆಯ ಉಸ್ತುವಾರಿ ಮತ್ತು ಲೋಕೋಪಯೋಗಿ ಇಲಾಖೆಯ ಸಚಿವರಾದ ಡಾ॥ ಹೆಚ್.ಸಿ. ಮಹದೇವಪ್ಪರವರು ಜಾಂಬೂರಿಯನ್ನು ಸಂಘಟಿಸುವುದರಲ್ಲಿ ಸಮಸ್ತ ಜವಬ್ದಾರಿಯನ್ನು ವಹಿಸಿಕೊಂಡಿದ್ದಾರೆ. ಮೈಸೂರಿನಲ್ಲಿ ಮತ್ತು ಬೆಂಗಳೂರಿನಲ್ಲಿ ಹಲವಾರು ಬಾರಿ ಅಧಿಕಾರಿಗಳ ಸಭೆಯನ್ನು ಕರೆದು, ಜಾಂಬೂರಿಯ ಪ್ರತಿಯೊಂದು ವಿವರವನ್ನು ಪಡೆದು ಸೂಕ್ತ ನಿರ್ದೇಶನಗಳನ್ನು ಸಕಾಲದಲ್ಲಿ ನೀಡಿದ್ದಾರೆ. ಯೋಜನೆ ಮತ್ತು ಕಾರ್ಯಕ್ರಮದ ಸಂಪೂರ್ಣ ಜವಾಬ್ದಾರಿಯನ್ನು ವಹಿಸಿಕೊಂಡು ನಮ್ಮ ಶ್ರಮವನ್ನು ಹಗುರಗೊಳಿಸಿದ್ದಾರೆ. ಭವಿಷ್ಯದ ಭಾರತವನ್ನು ರೂಪಿಸಲು ಅವರು ತೊಡಗಿಕೊಂಡ ರೀತಿ ಅನುಕರಣೀಯ. ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಪರವಾಗಿ ಮತ್ತು ವೈಯಕ್ತಿಕವಾಗಿ ನಾನು ಅವರಿಗೆ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಗೃಹ ಸಚಿವರಾದ ಸನ್ಮಾನ್ಯ ಜಿ.ಪರಮೇಶ್ವರ್ ಅವರು ಅಗತ್ಯವಾದ ಸಲಹೆಗಳನ್ನು ಸಹಕಾರವನ್ನು ನೀಡಿದ್ದಾರೆ. ಅವರ

ಬೆಂಬಲ ಗಣನೀಯವಾದದ್ದು. ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಪರವಾಗಿ ಮತ್ತು ವೈಯಕ್ತಿಕವಾಗಿ ನಾನು ಅವರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಸ್ವತ: ಸ್ಕೌಟ್ ಆದ ಸನ್ಮಾನ್ಯ ಶ್ರೀ ಯು.ಟಿ.ಖಾದರ್, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರ ಖಾತೆ ಸಚಿವರು, ಅವರಿಗೆ ಭವಿಷ್ಯದ ಪ್ರಜೆಗಳಾದ ಮಕ್ಕಳ ಚಾರಿತ್ರ್ಯ ನಿರ್ಮಾಣಕ್ಕೆ ಸ್ಕೌಟ್ಸ್ ಚಳವಳಿ ನೀಡಿರುವ ಕೊಡುಗೆಯ ಬಗ್ಗೆ ಬಹಳ ತೃಪ್ತಿ ಇದೆ. ಜಾಂಬೂರಿಯ ಬಗ್ಗೆ ಹೆಮ್ಮೆ ಇದೆ. ಈ ಕಾರ್ಯಕ್ರಮವನ್ನು ತಮ್ಮದೇ ಕಾರ್ಯಕ್ರಮ ಎಂಬಂತೆ ಭಾವಿಸಿ ಜಾಂಬೂರಿಯ ಯಶಸ್ಸಿಗೆ ಶ್ರಮಿಸಿದ್ದಾರೆ.

ಸನ್ಮಾನ್ಯ ಶ್ರೀ ತನ್ವೀರ್ ಸೇಠ್, ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು, ಸನ್ಮಾನ್ಯ ಶ್ರೀ ಬಸವರಾಜ ರಾಯರೆಡ್ಡಿ, ಉನ್ನತ ಶಿಕ್ಷಣ ಖಾತೆ ಸಚಿವರು, ಸನ್ಮಾನ್ಯ ಶ್ರೀ ಎಚ್.ಎಸ್.ಮಹದೇವ ಪ್ರಸಾದ್, ಸಹಕಾರ ಮತ್ತು ಸಕ್ಕರೆ ಇಲಾಖೆ ಸಚಿವರು, ಸನ್ಮಾನ್ಯ ಶ್ರೀ ಆರ್.ವಿ.ದೇಶಪಾಂಡೆ, ಬೃಹತ್ ಮತ್ತು ಮಧ್ಯಮ ಕೈಗಾರಿಕೆ, ಮೂಲ ಅಭಿವೃದ್ಧಿ ಖಾತೆ ಸಚಿವರು, ಸೇರಿದಂತೆ ಕರ್ನಾಟಕ ಸರ್ಕಾರದ ಎಲ್ಲಾ ಸಚಿವರು ಜಾಂಬೂರಿಯ ಆಯೋಜನೆ ಮತ್ತು ಕಾರ್ಯನಿರ್ವಹಣೆಗೆ ಅಗತ್ಯವಾದ ಬೆಂಬಲವನ್ನು ನೀಡಿದ್ದಾರೆ. ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಪರವಾಗಿ ಮತ್ತು ವೈಯಕ್ತಿಕವಾಗಿ ನಾನು ಅವರಿಗೆ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಕರ್ನಾಟಕ ಸರ್ಕಾರದ ವಿವಿಧ ಇಲಾಖೆಯ ಅಧಿಕಾರಿಗಳು ಜಾಂಬೂರಿಯನ್ನು ತಮ್ಮದೇ ಕಾರ್ಯಕ್ರಮವೆಂದು ಭಾವಿಸಿ ಅದರ ಸಂಘಟನೆಯಲ್ಲಿ ತೊಡಗಿಕೊಂಡಿದ್ದಾರೆ. ವಿಶೇಷವಾಗಿ ಶ್ರೀ ಅಜಯ್ ಸೇಠ್, ಕರ್ನಾಟಕ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಇಲಾಖೆ, ಡಾ॥ ಪಿ.ಸಿ.ಜಾಫರ್, ರಾಜ್ಯ ಯೋಜನಾ ನಿರ್ದೇಶಕರು, ಸರ್ವ ಶಿಕ್ಷಣ ಅಭಿಯಾನ ಹಾಗೂ ಸಂಯೋಜಕರು, 17ನೇ ರಾಷ್ಟ್ರೀಯ ಜಾಂಬೂರಿ, ಶ್ರೀ ಡಿ.ರಂದೀಪ್, ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಹಾಗೂ ಸಂಯೋಜಕರು, 17ನೇ ರಾಷ್ಟ್ರೀಯ ಜಾಂಬೂರಿ, ಶ್ರೀ ವೆಂಕಟೇಶ್, ಹೆಚ್ಚುವರಿ ಜಿಲ್ಲಾಧಿಕಾರಿ, ಮೈಸೂರು, ಶ್ರೀ ರವಿ ಚನ್ನಣ್ಣನವರ್, ಪೋಲೀಸ್ ಅಧೀಕ್ಷಕರು, ಮೈಸೂರು, ಶ್ರೀಮತಿ ಸೌಜನ್ಯ, ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಶ್ರೀ ಕೆ.ಆನಂದ್, ನಿರ್ದೇಶಕರು, ಪ್ರಾಥಮಿಕ ಶಿಕ್ಷಣ, ಶ್ರೀಮತಿ ಫಿಲೊಮಿನ ಲೋಬೋ, ನಿರ್ದೇಶಕರು, ಪ್ರೌಢ ಶಿಕ್ಷಣ ಮತ್ತು ಎಲ್ಲಾ ಹಿರಿಯ ಮತ್ತು ಕಿರಿಯ ಅಧಿಕಾರಿಗಳು ತಮ್ಮ ಸಹಕಾರವನ್ನು ನೀಡಿದ್ದಾರೆ ಮತ್ತು ಬಹಳ ಅಚ್ಚುಕಟ್ಟಾಗಿ ಜಾಂಬೂರಿಯ ಕೆಲಸಗಳನ್ನು ಮಾಡಿಕೊಟ್ಟಿದ್ದಾರೆ. ಇವರೆಲ್ಲರ ಸಹಕಾರದ ಸಾಕರವೇ ಹದಿನೇಳನೆಯ ರಾಷ್ಟ್ರೀಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೂರಿ. ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಪರವಾಗಿ ಮತ್ತು ವೈಯಕ್ತಿಕವಾಗಿ ನಾನು ಅವರಿಗೆ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಸುಮಾರು ಇಪ್ಪತ್ತೈದು ಸಾವಿರಕ್ಕೂ ಹೆಚ್ಚು ಮಕ್ಕಳು ಭಾಗವಹಿಸುವ ಈ ಸಮಾವೇಶದ ಸಂಘಟನೆ ಬೃಹತ್ ಕೆಲಸವೇ ಸರಿ. ಮೈಸೂರು ನಂಜನಗೂಡು ರಸ್ತೆಯಲ್ಲಿರುವ ಅಡಕನಹಳ್ಳಿ ಕೈಗಾರಿಕಾ ಪ್ರದೇಶದಲ್ಲಿ ಸುಮಾರು 450 ಎಕರೆಗೂ ಹೆಚ್ಚು ಪ್ರದೇಶದಲ್ಲಿ ಈಗಾಗಲೇ ಒಂದು ಪುಟ್ಟ ಮಹಾನಗರವನ್ನು ಕಟ್ಟುವ ಕೆಲಸ ಆಗಿದೆ. ಟೆಂಟ್‌ಗಳನ್ನು ಹಾಕಲಾಗಿದೆ. ರಸ್ತೆಗಳು, ಶೌಚಾಲಯ, ಒಳ ಚರಂಡಿ ವ್ಯವಸ್ಥೆ, ಕುಡಿಯುವ ನೀರಿನ ವ್ಯವಸ್ಥೆ, ಬೆಳಕು, ವೈದ್ಯಕೀಯ ಸೌಲಭ್ಯ, ಆಟೋಟಗಳ ಮೈದಾನಗಳು, ಅಡಿಗೆ ಮನೆಗಳು, ಅಂಗಡಿ ಮುಂಗಟ್ಟೆಗಳು, ಇತ್ಯಾದಿ ವ್ಯವಸ್ಥೆಗಳು ತೃಪ್ತಿಕರವಾಗಿ ಆಗಿದೆ. ಸ್ವತ: ನಾನೇ ಮೈಸೂರಿಗೆ ಹಲವಾರುಬಾರಿ ಭೇಟಿ ಕೊಟ್ಟು ಕಾಮಗಾರಿಯನ್ನು ಪರಿಶೀಲಿಸಿದ್ದೇನೆ. ಜಾಂಬೂರಿ ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ ಪಿ.ವಿಶ್ವನಾಥ್, ಡಾ॥ ಗುರುಮೂರ್ತಿ, ಜಿಲ್ಲಾ ಕೋಶಾಧಿಕಾರಿ, ಮೈಸೂರು ಜಿಲ್ಲೆ, ಶ್ರೀ ಅಬ್ದುಲ್ ಜಮೀಲ್, ಜಿಲ್ಲಾ ಕಾರ್ಯದರ್ಶಿ, ಮೈಸೂರು ಜಿಲ್ಲೆ ಮತ್ತು ಅವರ ಸಂಗಡಿಗರು ಹಗಲಿರುಳೆನ್ನದೆ ಶ್ರಮಿಸುತಿದ್ದಾರೆ.

ಕರ್ನಾಟಕದ 33 ಸ್ಕೌಟ್ ಜಿಲ್ಲೆಗಳಿಂದ ಘಟಕಗಳು ಜಾಂಬೂರಿಗೆ ಬರಲಿದ್ದಾರೆ. ಹಲವಾರು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಜಾಂಬೂರಿಯಲ್ಲಿ ಅವರು ನೀಡಲಿದ್ದಾರೆ. ಎಲ್ಲಾ ಜಿಲ್ಲೆಯ ಮುಖ್ಯ ಆಯುಕ್ತರು, ಸ್ಕೌಟ್ಸ್ ಮತ್ತು ಗೈಡ್ಸ್ ಆಯುಕ್ತರುಗಳು, ಜಿಲ್ಲಾ ಕಾರ್ಯದರ್ಶಿಗಳು ಮತ್ತು ಇತರ ಪದಾಧಿಕಾರಿಗಳು ಈ ಕಾರ್ಯಕ್ರಮಗಳನ್ನು

ಸಂಘಟಿಸುವುದರಲ್ಲಿ ಶ್ರಮ ವಹಿಸಿದ್ದಾರೆ. ಜಾಂಬೂರಿಯ ನಂತರವೂ ಈ ಉತ್ಸಾಹವು ಕಡಿಮೆಯಾಗಬಾರದು. ಹದಿನೇಳನೆಯ ರಾಷ್ಟ್ರೀಯ ಜಾಂಬೂರಿಯು ನಮ್ಮ ಚಟುವಟಿಕೆಗಳಿಗೆ ನಿರಂತರ ಸ್ಫೂರ್ತಿಯ ಸೆಲೆಯಾಗಿರಬೇಕು.

ವಿವಿಧ ಜಿಲ್ಲೆಗಳ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರು, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಶಿಕ್ಷಣ ಇಲಾಖೆಯ ಇತರ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರ ಸಹಕಾರ ಈ ಬೃಹತ್ ಜಾಂಬೂರಿಯನ್ನು ಸಂಘಟಿಸುವುದರಲ್ಲಿ ಪ್ರಮುಖವಾಗಿದೆ. ಇವರೆಲ್ಲರಿಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕದ ಕೃತಜ್ಞತೆಯನ್ನು ಸಲ್ಲಿಸುತ್ತದೆ.

ಜಾಂಬೂರಿಯ ಆಯೋಜನೆಗೆ 22 ಸಮಿತಿಗಳು ಶ್ರಮಿಸಿವೆ. ಮುಖ್ಯ ಸಮಿತಿಯ ಜೊತೆಗೆ, ಸುರಕ್ಷತೆ, ರಕ್ಷಣೆ ಮತ್ತು ಅಪಾಯ ಸಂಭಾವ್ಯತೆಯನ್ನು ನಿಭಾಯಿಸುವ ಸಮಿತಿ, ಆರೋಗ್ಯ, ಕುಡಿಯುವ ನೀರು, ಒಳ ಚರಂಡಿ, ಆಹಾರ, ವಿದ್ಯುತ್, ಸಂಚಾರ ಮತ್ತು ಪ್ರವಾಸ, ಪ್ರದರ್ಶನ, ಮಾಹಿತಿ ಮತ್ತು ತಂತ್ರಜ್ಞಾನ, ಸ್ಮರಣ ಸಂಚಿಕೆ, ಆಹ್ವಾನ ಪತ್ರಿಕೆಗಳ ಮುದ್ರಣ ಮತ್ತು ಪ್ರಸರಣ, ಸಾರ್ವಜನಿಕ ಸಂಪರ್ಕ ಪ್ರಕಾಶನ ಮತ್ತು ಮಾಧ್ಯಮ, ರಕ್ಷಣಾ ಸಹಕಾರ, ವಸತಿ ಮತ್ತು ನೊಂದಣಿ, ಸ್ವಾಗತ ಮತ್ತು ಆತಿಥ್ಯ, ಕಾರ್ಯಕ್ರಮ, ಅಂತರ ರಾಷ್ಟ್ರೀಯ ಅತಿಥಿಗಳ ಸ್ವಾಗತ ಸಮಿತಿ, ಸಮಾರಂಭ ಸಮಿತಿ, ಜಾಂಬೂರಿ ಸಂಘಟನಾ ಸಮಿತಿ, ಸಹಕಾರ ಸಮಿತಿ ಮತ್ತು ಪರಿಷತ್ತು ಮುಂತಾದ ಸಮಿತಿಯ ಸದಸ್ಯರು ತಮ್ಮ ಸಮಯ ಮತ್ತು ಸಾಮರ್ಥ್ಯವನ್ನು ಜಾಂಬೂರಿಯ ಆಯೋಜನೆಗಾಗಿ ಧಾರೆ ಎರೆದಿದ್ದಾರೆ.

ಜಾಂಬೂರಿಯ ಸಂಘಟನೆಗೆ ನನ್ನೊಂದಿಗೆ ಹೆಗಲಿಗೆ ಹೆಗಲು ಕೊಟ್ಟು ದುಡಿಯುತ್ತಿರುವವರು ಹಲವಾರು ಹಿರಿಯ ನಾಯಕರು. ಸರ್ವಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಎಂ.ಎ.ಖಾಲಿದ್, ಮೋಹನ್ ಕುಮಾರ್ ಕೊಂಡಜ್ಜಿ, ಗೀತಾ ನಟರಾಜ್, ಚಿನ್ನಸ್ವಾಮಿರೆಡ್ಡಿ, ಪ್ರಭುದೇವ ಜೆ. ಚಿಗಟೇರಿ, ಕೆ. ಗಂಗಪ್ಪ ಗೌಡ, ಕೆ. ಕೃಷ್ಣಸ್ವಾಮಿ, ಎಸ್.ಕೆ. ಪ್ರಭಾ, ಎಂ.ಎ. ಚೆಲ್ಲಯ್ಯ, ಬಿ.ಆರ್.ಅನಿಲ್ ಕುಮಾರ್, ಕೃಷ್ಣಪ್ರಸಾದ್, ಎಲ್ಲಾ 33 ಜಿಲ್ಲೆಗಳ ಮುಖ್ಯ ಆಯುಕ್ತರು, ಕಾರ್ಯದರ್ಶಿಗಳು ಮತ್ತು ಇತರ ಪದಾಧಿಕಾರಿಗಳು, ರಾಜ್ಯ ತರಬೇತಿ ಆಯುಕ್ತರುಗಳಾದ ಶ್ರೀ ಎಲ್.ಟಿ. ಲೋಕೇಶ್, ಶ್ರೀಮತಿ ಕೆ.ವಿ. ಶಾಮಲ, ರಾಜ್ಯ ಸಂಘಟನಾ ಆಯುಕ್ತರುಗಳಾದ ಶ್ರೀ ಎಂ.ಪ್ರಭಾಕರ್ ಭಟ್ ಮತ್ತು ಶ್ರೀಮತಿ ಮಂಜುಳ ಮತ್ತು ಇತರ ಕಾರ್ಯಕರ್ತರುಗಳು ಜಿಲ್ಲೆಗಳಲ್ಲಿ ಪ್ರವಾಸ ಮಾಡಿ ಜಿಲ್ಲಾ ತಂಡಗಳನ್ನು ಜಾಂಬೂರಿಯ ಕಾರ್ಯಚಟುವಟಿಕೆಗಳಿಗೆ ಸಿದ್ಧಪಡಿಸಿದ್ದಾರೆ. ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಬೆಂಬಲಿಸುತಿದ್ದಾರೆ. ಸ್ಥಳಾಭಾವದಿಂದ ಎಲ್ಲರ ಹೆಸರುಗಳನ್ನು ಸೂಚಿಸಲು ಆಗುತ್ತಿಲ್ಲ. ಅನ್ಯಥಾ ಭಾವಿಸಬಾರದೆಂದು ಕೋರುತ್ತೇನೆ.

ಕಾರ್ಯಕ್ರಮ ಸಮಿತಿಯು ಬಹುಚೊಕ್ಕವಾಗಿ ಎಂಟು ದಿನಗಳ ಚಟುವಟಿಕೆಗಳನ್ನು ಆಯೋಜಿಸಿದೆ. ಕಾರ್ಯಕ್ರಮ ಸಮಿತಿಯ ಶ್ರೀ ಎಂ.ಎ.ಖಾಲಿದ್, ಶ್ರೀಮತಿ ರಾಧಾ ವೆಂಕಟೇಶ್, ಶ್ರೀ ಜಿತೇಶ್, ಕು. ಮೇಘನ ಎಸ್. ಬೆಳವಾಡಿ ಮತ್ತು ಇತರ ಮುಖಂಡರುಗಳು ಅಭಿನಂದನೀಯರು.

ಕಾಲ ಹೊರಳುವ ಸಮಯವಿದು. 2016 ಕಳೆದು 2017ನೆಯ ವರ್ಷಕ್ಕೆ ಪ್ರವೇಶ ಮಾಡುತಿದ್ದೇವೆ. ಈ ವರ್ಷದಲ್ಲಿ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಮತ್ತು ವೈಯಕ್ತಿಕವಾಗಿ ನಾವುಗಳು ಯಾವ ಕೆಲಸ ಕಾರ್ಯಗಳನ್ನು ಮಾಡಿದೆವು, ಸಮಾಜದ ಒಳಿತಿಗೆ ನಮ್ಮ ಕಾಣಿಕೆ ಏನು? ಎಂದು ಆತ್ಮಾವಲೋಕನ ಮಾಡಿಕೊಳ್ಳಬೇಕಾಗಿದೆ. 2016ರಲ್ಲಿ ನಮ್ಮ ಸಂಸ್ಥೆಯು ತನ್ನ ಬೆಳವಣಿಗೆಯಲ್ಲಿ ದಾಪುಗಾಲು ಹಾಕಿದೆ ಎಂದು ನಾನು ಭಾವಿಸುತ್ತೇನೆ. ವರ್ಷವಿಡೀ ತರಬೇತಿ ಶಿಬಿರಗಳು, ಕಾರ್ಯಾಗಾರಗಳು, ಸಮುದಾಯ ಸೇವಾ ಕಾರ್ಯಗಳು, ಕರ್ನಾಟಕ ದರ್ಶನ, ಮುಂತಾದ ಚಟುವಟಿಕೆಗಳು ಪ್ರತಿ ಜಿಲ್ಲೆಯಲ್ಲೂ ಯಶಸ್ವಿಯಾಗಿ ನಡೆದಿದೆ. ನಮ್ಮ ಸದಸ್ಯರ ಸಂಖ್ಯೆಯನ್ನು ಹೆಚ್ಚಿಸುವುದರಲ್ಲಿ ಗಮನಾರ್ಹವಾದ ಪ್ರಯತ್ನ ಮಾಡಲಾಗಿದೆ. ರೋವರ್ಸ್ ಮತ್ತು ರೇಂಜರ್ಸ್ ಘಟಕಗಳನ್ನು ವಿಶ್ವವಿದ್ಯಾಲಯಗಳಲ್ಲಿ ಸಂಘಟಿಸುತ್ತಿದ್ದೇವೆ. ಮೊರಾರ್ಜಿ ದೇಸಾಯಿ ಶಾಲೆಗಳಲ್ಲಿ, ಬೆಂಗಳೂರು ಮಹಾನಗರ ಪಾಲಿಕೆಯ ಶಾಲೆಗಳಲ್ಲಿ ನಮ್ಮ ಚಟುವಟಿಕೆಗಳು ಹಬ್ಬುತ್ತಿದೆ. ನಮ್ಮ ಸಂಸ್ಥೆಯ ಮುಖ್ಯ ಆಯುಕ್ತರಾಗಿದ್ದ ಶ್ರೀ ದೀನದಯಾಳು ನಾಯ್ಡುರವರ ಶತಮಾನೋತ್ಸವ ಸಮಾರಂಭವು ಅದ್ದೂರಿಯಾಗಿ ನಡೆದಿದೆ. ಜಿಲ್ಲಾ, ತಾಲ್ಲೂಕು ಮತ್ತು ನಗರ ಘಟಕಗಳ ಪದಾಧಿಕಾರಿಗಳನ್ನು, ಸದಸ್ಯರನ್ನು, ಭೇಟಿ ಮಾಡಿದ್ದೇನೆ. ನಮ್ಮ ಬೆಳವಣಿಗೆಗೆ ಪೂರಕವಾಗಿ ಎಲ್ಲಾ ಜಿಲ್ಲಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆಯ

ಅಧಿಕಾರಿಗಳು ಶ್ರಮಿಸಿದ್ದಾರೆ. ನಮ್ಮ ತರಬೇತಿದಾರರು ಮತ್ತು ಶಿಕ್ಷಕರ ಕಾಣಿಕೆಯು ಗಣನೀಯವಾದುದು. ನಮ್ಮ ಸಂಸ್ಥೆಯ ಶ್ರೀ ಕೆ.ಹೆಚ್.ಜಯರಾಮಯ್ಯ, ವಿಶೇಷಾಧಿಕಾರಿ, 17ನೇ ರಾಷ್ಟ್ರೀಯ ಜಾಂಬೂರಿ, ಶ್ರೀಮತಿ ಜೋಸೆಫಿನ್ ಫೇಲಿಸಿಟಾ, ಲೆಕ್ಕಿಗರು ಮತ್ತು ಪ್ರಭಾರಿ ವ್ಯವಸ್ಥಾಪಕರು ಮತ್ತು ಸಿಬ್ಬಂದಿ ವರ್ಗದವರು ಆಸಕ್ತಿಯಿಂದ ದುಡಿದಿದ್ದಾರೆ.

ಜಾಂಬೂರಿಯ ಯಶಸ್ಸು ಸಾಮೂಹಿಕ ನಾಯಕತ್ವದ ಮೂಲಕ ಸಾಧ್ಯವಾಗುತ್ತಿದೆ. ಎಲ್ಲರ ಆಲೋಚನೆಗಳು ನಿರ್ವಹಣಾ ಸಾಮರ್ಥ್ಯ, ಕಾರ್ಯಕ್ಷಮತೆ ಯಶಸ್ಸಿಗೆ ದಾರಿ ದೀಪವಾಗಿದೆ. ಹೊಸವರ್ಷದಲ್ಲಿ ನಮ್ಮ ಪ್ರಯತ್ನಗಳು ಇನ್ನೂ ಹೆಚ್ಚಿನ ಮಟ್ಟ ತಲುಪಬೇಕಾಗಿದೆ. ನಿರೀಕ್ಷೆಗಳು ಹೆಚ್ಚಾಗಿದೆ.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ರಾಷ್ಟ್ರೀಯ ಪರಿಷತ್ತು ಕಳೆದ ತಿಂಗಳು ಹೊಸ ಪದಾಧಿಕಾರಿಗಳನ್ನು ಆಯ್ಕೆ ಮಾಡಿದೆ. ಹೊಸದಾಗಿ ರಾಷ್ಟ್ರೀಯ ಅಧ್ಯಕ್ಷರಾಗಿ ಆಯ್ಕೆಯಾದ ಡಾ॥ ಅನಿಲ್ ಕುಮಾರ್ ಜೈನ್ ಮತ್ತು ಶ್ರೀ ಬಿ.ಐ.ನಾಗರಾಳೆ, ಮುಖ್ಯ ರಾಷ್ಟ್ರೀಯ ಆಯುಕ್ತರು ಮತ್ತು ಇತರ ಪದಾಧಿಕಾರಿಗಳನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಕರ್ನಾಟಕ ಸ್ಕೌಟ್ಸ್‌ನ ರಾಜ್ಯ ಆಯುಕ್ತರು (ಗೈಡ್ಸ್) ಆದ ಶ್ರೀಮತಿ ಗೀತಾ ನಟರಾಜ್‌ರವರು ರಾಷ್ಟ್ರೀಯ ಉಪಾಧ್ಯಕ್ಷರಾಗಿ ಆಯ್ಕೆಯಾಗಿದ್ದಾರೆ. ಇದು ನಮಗೆ ಹೆಮ್ಮೆಯ ವಿಷಯ.

ಇದು ಕ್ರಿಸ್‌ಮಸ್ ತಿಂಗಳು. ಮನುಕುಲದ ಏಳಿಗೆಗಾಗಿ ಮತ್ತು ಶಾಂತಿಗಾಗಿ ತನ್ನನ್ನೇ ಬಲಿದಾನವಾಗಿಸಿಕೊಂಡ ಮಹಾಮಾನವ ಏಸುಕ್ರಿಸ್ತರ ಜನ್ಮದಿನಾಚರಣೆ. ಕ್ರಿಸ್‌ಮಸ್ ಹಬ್ಬವನ್ನು ನಾವು ಯಾಂತ್ರಿಕವಾಗಿ ಆಚರಿಸಬಾರದು. ಕ್ರಿಸ್ತರ ಸಂದೇಶಗಳು ಎಂದಿಗಿಂತಲೂ ಇಂದು ತೀವ್ರವಾಗಿ ಬೇಕಾಗಿದೆ. ಅವರ ಮಾತುಗಳನ್ನು ಕಾಯಾ, ವಾಚ, ಮನಸಾ, ನಾವಿಂದು ಮನುಕುಲದ ಉಳಿವಿಗಾಗಿ, ಆರೋಗ್ಯಕರ ಬೆಳವಣಿಗೆಗಾಗಿ ಪಾಲಿಸಬೇಕು.

ಜನವರಿ 14ರಂದು ಸುಗ್ಗಿಯ ಹಬ್ಬ, ರೈತರ ಶ್ರಮ ಕೈಗೂಡುವ ಸಮಯ. ಸಂಕ್ರಾಂತಿಯು ಸಂಮೃದ್ಧಿಯೊಂದಿಗೆ ಶಾಂತಿ ಮತ್ತು ಪ್ರೇಮದ ಸಂದೇಶವನ್ನು ನೀಡುತ್ತದೆ. ಅದಕ್ಕಾಗಿಯೇ ನಮ್ಮ ಹಿರಿಯರು **"ಎಳ್ಳು ಬೆಲ್ಲ ತಿಂದು ಒಳ್ಳೆಯ ಮಾತನಾಡಿ"** ಎಂಬ ಕಿವಿಮಾತು ಹೇಳಿದ್ದಾರೆ.

**ನಿಮಗೆಲ್ಲರಿಗೂ ಹೊಸ ವರ್ಷದ ಹಾರ್ದಿಕ ಶುಭಾಶಯಗಳು.**
**ಹೊಸವರ್ಷದಲ್ಲಿ ನಿಮ್ಮ ಶ್ರಮವು ಸಾರ್ಥಕವಾಗಲಿ ಎಂದು ಹಾರೈಸುತ್ತೇನೆ.**

**"ಒಗಟ್ಟಿನಿಂದ ನಾಳಿನ ಸುದಿನದೆಡೆಗೆ ಹೆಜ್ಜೆ ಹಾಕೋಣ"**
**ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ**

ತಮ್ಮ ವಿಶ್ವಾಸಿ
(ಸಹಿ)
**ಪಿ.ಜಿ.ಆರ್. ಸಿಂಧ್ಯ**
**ರಾಜ್ಯ ಮುಖ್ಯ ಆಯುಕ್ತರು**



# ರಾಷ್ಟ್ರಪತಿ ಗೈಡ್ಸ್ ಪರೀಕ್ಷಾ ಶಿಬಿರ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದಕ್ಷಿಣ ಪ್ರಾಂತೀಯವತಿಯಿಂದ ಡಿಸೆಂಬರ್ 5 ರಿಂದ 09ರ ವರೆಗೆ ಮತ್ತು ಡಿಸೆಂಬರ್ 10 ರಿಂದ 14 ರ ವರೆಗೆ ಶ್ರೀ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಕೇಂದ್ರ ಕೊಂಡಜ್ಜಿ ಹರಿಹರ ತಾಲ್ಲೂಕು ದಾವಣಗೆರೆ ಜಿಲ್ಲೆ ಇಲ್ಲಿ ರಾಷ್ಟ್ರಪತಿ ಗೈಡ್ಸ್ ಪ್ರಶಸ್ತಿಗಾಗಿ ಪರೀಕ್ಷಾ ಶಿಬಿರವನ್ನು ಆಯೋಜಿಸಲಾಗಿತ್ತು.

ಸದರಿ ಶಿಬಿರಕ್ಕೆ ಶ್ರೀಮತಿ ಮಾಚಮ್ಮ, ಡಿ.ಡಿ.ಜಿ.ಎಲ್.ಟಿ. ಹಾಗೂ ಶ್ರೀಮತಿ ಸುಮಲತಾ, ಜಂಟಿ ನಿರ್ದೇಶಕರು ರಾಷ್ಟ್ರಸಂಸ್ಥೆ ಇವರು ನಾಯಕಿಯರಾಗಿ ಸೇವೆ ಸಲ್ಲಿಸಿದರು.

ಇವರಿಗೆ ಸಹಾಯಕಿಯರಾಗಿ ಶ್ರೀಮತಿಯರಾದ ಅಜೀಜಾ ಸುಲ್ತಾನ್, ಎಲ್.ಟಿ.(ಜಿ) ಭಾರತಿ ಡಯಾಸ್, ಸಿ.ಎಸ್. ಲಕ್ಷ್ಮಿ ಮಂಗಿ, ಸಿಸ್ಟರ್ ಸಿಂಥಿಯಾ, ಎನ್.ಕೆ. ಛಾಯಾ, ಮಲ್ಲೇಶ್ವರಿ ಜುಜಾರಿ, ಕುಮಾರಿ ಹೊನ್ನಮ್ಮ, ಪ್ರಿಯಾಂಕ, ಹೆಚ್. ಎಂ. ಮಮತ, ಚಂದ್ರಮತಿ, ಸರೋಜ ಮುಂತಾದ ತರಬೇತುದಾರರು ಪರೀಕ್ಷಾ ಶಿಬಿರದಲ್ಲ ಸೇವೆ ಸಲ್ಲಿಸಿದರು.

ಕರ್ನಾಟಕ ರಾಜ್ಯದ ಬೆಂಗಳೂರು ಉತ್ತರ, ಬೆಂಗಳೂರು, ದಕ್ಷಿಣ, ಬೆಳಗಾವಿ, ಬಳ್ಳಾರಿ, ಚಿತ್ರದುರ್ಗ, ದಾವಣಗೆರೆ, ದಕ್ಷಿಣ ಕನ್ನಡ, ಧಾರವಾಡ, ಗದಗ, ಹಾವೇರಿ, ಹಾಸನ, ಕೊಡಗು, ಕೊಪ್ಪಳ, ಕೋಲಾರ, ಚಿಕ್ಕಬಳ್ಳಾಪುರ, ರಾಯಚೂರು, ಮೈಸೂರು, ಉಡುಪಿ, ತುಮಕೂರು, ಜಿಲ್ಲೆಗಳ 500 ಗೈಡ್ಸ್‌ಗಳು ಭಾಗವಹಿಸಿದ್ದರು.

## ಶ್ರದ್ಧಾಂಜಲಿ



**ಶ್ರೀಮತಿ ವನಜಾಕ್ಷಿ ಕೆ.** ಅವರು ಡಿಸೆಂಬರ್ 15ರಂದು ಮೂಡಬಿದಿರೆ, ಬೆಟ್ಕೇರಿ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಿಧನರಾದರು.

ಇವರು ಗೈಡ್ ವಿಭಾಗದಲ್ಲಿ ಹೆಚ್.ಡಬ್ಲ್ಯೂ.ಬಿ. ತರಬೇತಿ ಹೊಂದಿದ್ದು, ಎಸ್.ವಿ.ಎಸ್. ಹೈಯರ್ ಪ್ರೈಮರಿ ಶಾಲೆ, ಪಾಣೆಮಂಗಳೂರು, ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಗೈಡ್ ಶಿಕ್ಷಕಿಯಾಗಿ ಸೇವೆ ಸಲ್ಲಿಸುತ್ತಿದ್ದರು.

ಮೃತರ ಆತ್ಮಕ್ಕೆ ಶಾಂತಿ ಸಿಗಲೆಂದು ಹಾಗೂ ಅವರ ಅಗಲಿಕೆಯ ದುಃಖವನ್ನು ಭರಿಸುವ ಶಕ್ತಿಯನ್ನು ಅವರ ಬಂಧು ಬಳಗದವರಿಗೆ ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

– ರಾಜ್ಯ ಕಾರ್ಯದರ್ಶಿ

# Bike Rally

A Bike Rally from Bengaluru to Jamboree Site was arranged on December 10th under the auspicious of State Youth Committee B.S. & G. Karanataka to create awareness on the upcoming 17th National Jamboree at Adakanahally Industrial Area, Mysuru.

54 Rovers and Rangers from Bengaluru North, Bengaluru South and Shimoga Districts participated in the Rally. Sri M.A. Khalid, S.C.(S.) and Smt. Geetha Nataraj, S.C.(G) flagged off the rally at Shanthi Gruha at 8.00 am in the morning.

They were given a warm welcome at Mandy. Later they were received by the District Officials of Mysuru at Mysuru District Association and were served with lunch. Sri Nagarale I.A.S., (Retd.) C.N.C., B.S.& G. & Sri K. Sukumara, Director, B.S.& G. met the participants and wished them Good luck. Later they rode to Jamboree site and went around the Jamboree site. Certificate were distributed to the participants .

The Rally was organised by Miss. Meghana Belavadi, Chairman, State Youth Committee.



**ಗಮನಿಸಿ**

"ಸ್ಕೌಟ್ ಮತ್ತು ಗೈಡ್ ದಿನಚರಿ ಪುಸ್ತಕ ಭಾಗ 1" (LOG BOOK-Part 1)
ಹೊಸ ಪಠ್ಯ ವಿಷಯದನುಸಾರ ಪರಿಷ್ಕರಣೆಗೊಂಡು ಮಾರಾಟಕ್ಕೆ ಸಿದ್ಧವಾಗಿದೆ.
ಇದರ ಸದುಪಯೋಗ ಪಡೆದುಕೊಳ್ಳಲು ಕೋರಿಕೆ.

ಈ ದಿನಚರಿ ಪುಸ್ತಕವನ್ನು ಇನ್ನೂ ಉತ್ತಮವಾಗಿ ಪರಿಷ್ಕರಣಗೊಳಿಸುವ
ನಿಟ್ಟಿನಲ್ಲಿ ಸಲಹೆ-ಸೂಚನೆಗಳಿಗೆ ಸ್ವಾಗತ.

-ರಾಜ್ಯ ಕಾರ್ಯದರ್ಶಿ

# ಜಿಲ್ಲಾ ವಾರ್ತೆಗಳು

## Bengaluru North

The Shivajinagar Local Association conducted Badge Work Camp on 19th and 20th November 2016 at R.T. Nagar Group Institute, Singanayakahalli, Yelahanka. 238 Cubs-Bulbuls, Scouts - Guides. Participated in the Badge Work Camp.



The 'Dwitiya Sopan Test' was also conducted. The Programme was inaugurated by Mr. Prasanna Kumari, Vice-President of LA. Mr. T. S. Lucas, Chairman of LA Visited the camp. The Programme was co-ordinated by LA Secretary Miss Krupa Vijay, ALT(G).

## Bengaluru South

15th Kanteerava Scouts & Guides group of Bangalore South district conducted blood donation camp in association with Rashtrothana blood bank and free eye camp in association with Dr. Solanki eye hospital on December 4th at Akhila Karnataka Makkala Koota, Bengaluru. Total 72 units of blood was collected and 150 people got their eye tested.





# ಬೆಂಗಳೂರು ಗ್ರಾಮಾಂತರ



ಯುವಜನಾಂಗವು ಸ್ಥಳೀಯ, ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಸಮುದಾಯಗಳ ಜವಾಬ್ದಾರಿಯುತ ಸದಸ್ಯರಾಗಿ, ದೈಹಿಕ, ಬೌದ್ಧಿಕ, ಸಾಮಾಜಿಕ ಮತ್ತು ಆಧ್ಯಾತ್ಮಿಕ ಸಾಮರ್ಥ್ಯಗಳ ಪರಿಪೂರ್ಣ ಅಭಿವೃದ್ಧಿಗಾಗಿ ಶ್ರಮಿಸಬೇಕಾಗಿದೆ. ಇದಕ್ಕೆ ಪೂರಕವಾಗಿ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಮಕ್ಕಳಿಗೆ ಗುಣಮಟ್ಟದ ಶಿಕ್ಷಣದ ಜೊತೆಗೆ ಮಕ್ಕಳಲ್ಲಿ ಶಿಸ್ತು ಮತ್ತು ದೇಶಭಕ್ತಿ ಮೂಡಿಸಲು ಸಹಕಾರಿಯಾಗಿರುವುದಲ್ಲದೆ ಪಠ್ಯ ಹಾಗೂ ಪಠ್ಯೇತರ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡು ಅವರಲ್ಲಿ ಆತ್ಮ ವಿಶ್ವಾಸ ತುಂಬುವ ಮೆಟ್ಟಿಲಾಗಿ ಕೆಲಸ ನಿರ್ವಹಿಸುತ್ತಿರುವುದು ಶ್ಲಾಘನೀಯ ಎಂದು ಜಿಲ್ಲಾಧಿಕಾರಿ ಶ್ರೀ ಎಸ್. ಪಾಲಯ್ಯ ಹೇಳಿದರು.

ಬೆಂಗಳೂರು ಗ್ರಾಮಾಂತರ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ವತಿಯಿಂದ ಜಿಲ್ಲಾಧಿಕಾರಿಗಳ ಕಛೇರಿ ಸಭಾಂಗಣದಲ್ಲಿ ಹಮ್ಮಿಕೊಂಡಿದ್ದ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥಾಪನಾ ದಿನಾಚರಣೆ ಅಂಗವಾಗಿ ಧ್ವಜ ಚೀಟಿ ಬಿಡುಗಡೆ ಮಾಡಿ ಮಾತನಾಡಿದರು.



* ಬಹಳ ವೇಗವಾಗಿ ಬೆಳೆಯುತ್ತಿರುವ ಭಾರತದಂತಹ ದೇಶಕ್ಕೆ ಉತ್ತಮ ವ್ಯಕ್ತಿತ್ವದ ಸಮಾಜಮುಖಿ ದೇಶಪ್ರೇಮ ಹಾಗೂ ಮಾನವೀಯ ಮೌಲ್ಯಗಳುಳ್ಳ ಸಧೃಢ ಯುವಕರನ್ನು ತಯಾರು ಮಾಡುವುದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಮುಖ್ಯಉದ್ದೇಶ ಎಂದು ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯಾ ತಿಳಿಸಿದರು. ಕೇಂದ್ರ ಕಛೇರಿಯಲ್ಲಿ ಕರೆದಿದ್ದ ಬೆಂಗಳೂರು ಗ್ರಾಮಾಂತರ ಜಿಲ್ಲಾ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಜಿಲ್ಲಾ ಸಮಿತಿ ಸಭೆಯಲ್ಲಿ ಮಾತನಾಡಿದ ಅವರು ಗುಣಮಟ್ಟದ ಶಿಕ್ಷಣದ ಜೊತೆಗೆ ಮಕ್ಕಳಲ್ಲಿ ಶಿಸ್ತು ಮತ್ತು ಕ್ರಿಯಾಶೀಲತೆ ಮೂಡಿಸಲು ಹಾಗು ಸಹೋದರತ್ವ ಮತ್ತು ಸಹಜೀವನವನ್ನು ಬೆಳೆಸಲು ಸ್ಕೌಟ್ಸ್ ಮತ್ತು ಗೈಡ್ಸ್‌ನ ತರಬೇತಿಗಳು ಸಹಕಾರಿಯಾಗಿವೆ. ಕಳೆದ ನೂರು ವರ್ಷಗಳಿಂದ ಕರ್ನಾಟಕದ ಮಕ್ಕಳಲ್ಲಿ ಶೈಕ್ಷಣಿಕ, ಬೌದ್ಧಿಕ, ದೈಹಿಕ ವಿಕಾಸದ ಜೊತೆಗೆ ಸೇವಾ ಮನೋಭಾವನೆಯನ್ನು ಮತ್ತು ಸಹೋದರತ್ವದ ಗುಣಗಳನ್ನು ಬೆಳೆಸುವುದರಲ್ಲಿ ನಾವು ಯಶಸ್ವಿಯಾಗಿದ್ದೇವೆ ಎಂಬ ಹೆಮ್ಮೆ ನನಗಿದೆ ಎಂದರು.



* ಕರ್ನಾಟಕದಲ್ಲಿ ಇತರ ರಾಜ್ಯಗಳಿಂದ ಬಂದಿರುವ ಜನರು ಕೂಲಿ ಇನ್ನಿತರೆ ಕೆಲಸಗಳನ್ನು ಮಾಡಿಕೊಂಡು ಅವರವರ ಭಾಷೆಯಲ್ಲಿಯೇ ವ್ಯವಹರಿಸುತ್ತಿದ್ದಾರೆ. ಆದರೆ ನಾವು ಕನ್ನಡಿಗರು ಮಾತ್ರ ಕನ್ನಡ ನೆಲದಲ್ಲಿಯೇ ಪರಕೀಯರಾಗಿದ್ದೇವೆ ಎಂದು ಅನಿಸುತ್ತಿದೆಯೆಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಜ್ಯ ಕಾರ್ಯದರ್ಶಿ ಹಾಗು ರಾಷ್ಟ್ರ ಪ್ರಶಸ್ತಿ ಪುರಸ್ಕೃತ ಶ್ರೀ ಚಿನ್ನಸ್ವಾಮಿರೆಡ್ಡಿ ತಿಳಿಸಿದರು. ದೇವನಹಳ್ಳಿಯ ಪಾರಿವಾಳ ಗುಟ್ಟದಲ್ಲಿ ಕಡಲೇಕಾಯಿ ಪರಿಷೆ ಅಂಗವಾಗಿ ಕರ್ನಾಟಕ ರಕ್ಷಣಾ ವೇದಿಕೆ (ಶಿವರಾಮೇಗೌಡ ಬಣ) ಹಮ್ಮಿಕೊಂಡಿದ್ದ 61ನೇ ಕನ್ನಡ ರಾಜ್ಯೋತ್ಸವ ಕಾರ್ಯಕ್ರಮದಲ್ಲಿ ಧ್ವಜಾರೋಹಣ ನೆರವೇರಿಸಿ ಅವರು ಮಾತನಾಡಿದರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಜಿಲ್ಲಾಧ್ಯಕ್ಷ ಶ್ರೀ ಬಿ.ಕೆ. ಶಿವಪ್ಪ ಮಾತನಾಡಿ ಮಾತೃಭಾಷೆ ನಮಗೆ ತೊಟ್ಟಿಲು ಇದ್ದ ಹಾಗೆ ಇತರ ಭಾಷೆಗಳು ನಮಗೆ ಮೆಟ್ಟಿಲು ಇದ್ದ ಹಾಗೆ ಎಂದು ತಿಳಿಸಿದರು.

* ದಿನಾಂಕ 25-11-2016 ರಿಂದ 26-11-2016 ರ ವರೆಗೆ ದ್ವಿತೀಯ ಸೋಪಾನದ ಪರೀಕ್ಷಾ ಶಿಬಿರ ಮತ್ತು ದಿ॥ ಶ್ರೀಕಂಠಮೂರ್ತಿ ಎ.ಎಲ್.ಟಿ.(ಎಸ್) (ಹಿಂದಿನ ಜಿಲ್ಲಾ ಕಾರ್ಯದರ್ಶಿ) ಅವರ ಮೊದಲನೇ ವರ್ಷದ ಪುಣ್ಯ ಸ್ಮರಣೆ ಆಚರಿಸಲಾಯಿತು.

ಈ ಶಿಬಿರದಲ್ಲಿ 10 ಶಾಲೆಗಳಿಂದ 73 ಸ್ಕೌಟ್ಸ್, 36 ಗೈಡ್ಸ್‌ಗಳು ಭಾಗವಹಿಸಿದ್ದರು. ಶಿಬಿರದ ನಾಯಕರಾದ ಶ್ರೀ ಡಿ. ರಾಜಗೋಪಾಲ್, ಸಹಾಯಕರಾದ ಶ್ರೀ ಜಿ.ಎಸ್. ಮುದ್ದಪ್ಪನವರ್, ಶ್ರೀ ಕುಮಾರ್, ಶ್ರೀ ಕೆ. ವೆಂಕಟೇಶ್, ಶ್ರೀಮತಿ ಕುಮಾರಿ, ಶ್ರೀ ಚಿಕ್ಕಮುನಿಯಪ್ಪ, ಶ್ರೀ ಚಂದ್ರಶೇಖರ್, ಶ್ರೀಮತಿ ಪದ್ಮಾವತಿ ಮತ್ತು ಸ್ಥಳೀಯ ಸಂಸ್ಥೆಯ ಗೌ॥ ಅಧ್ಯಕ್ಷರು ಶ್ರೀ ಬಾಬು ರಾಜೇಂದ್ರ ಪ್ರಸಾದ್, ಅಧ್ಯಕ್ಷರು, ಶ್ರೀ ಮೋಹನ್ ಬಾಬು, ಕಾರ್ಯದರ್ಶಿ ಶ್ರೀ ವಿ.ಜಿ. ಹಂದಾರ್ ಹಾಗೂ ಪುರಸಭೆಯ ಅಧ್ಯಕ್ಷರು ಸದಸ್ಯರು ಹಾಜರಿದ್ದರು.

ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಸತೀಶ್ ಕುಮಾರ್, ಪುರಸಭೆ ಸದಸ್ಯರು ನೆರವೇರಿಸಿದರು. ದಿ॥ ಶ್ರೀ ಕಂಠಮೂರ್ತಿ ರವರ ಪುತ್ರ ಮತ್ತು ಕುಟುಂಬದವರು ಹಾಜರಿದ್ದರು. ಅಧ್ಯಕ್ಷತೆಯನ್ನು ಶ್ರೀ ಮೋಹನ್ ಬಾಬು ವಹಿಸಿದ್ದರು.

## ಚಿತ್ರದುರ್ಗ



ನವಂಬರ್ 15 ರಿಂದ 17ರ ವರೆಗೆ ನಡೆದ ದ್ವಿತೀಯ ಸೋಪಾನ ಶಿಬಿರದ ಉದ್ಘಾಟನಾ ಕಾರ್ಯಕ್ರದ ಅಧ್ಯಕ್ಷತೆಯುನ್ನು ಶ್ರೀ ಸ್ಟೀಫನ್ ಜೈರಾಜ್ ರವರು ವಹಿಸಿದ್ದರು. ಕಾರ್ಯಕ್ರಮದ ಉದ್ಘಾಟನೆಯನ್ನು ಮಾನ್ಯ ಶ್ರೀ ಎಂ. ರೇವಣಸಿದ್ದಪ್ಪರವರು, ನೆರವೇರಿಸಿದರು. ಇವರು ಸ್ಕೌಟ್ಸ್-ಗೈಡ್ಸ್‌ಗಳ ಪ್ರಗತಿಪರ ಶಿಕ್ಷಣದ ಬಗ್ಗೆ ಸ್ಕೌಟ್ಸ್-ಗೈಡ್ಸ್ ಹಂತ ಹಂತವಾಗಿ ಪಡೆಯುವ ತರಬೇತಿಗಳಿಂದ ಮಾನವೀಯ ಮೌಲ್ಯ ಹಾಗೂ ನಾಯಕತ್ವ ಗುಣಗಳನ್ನು ಬೆಳೆಸಿಕೊಳ್ಳುವ ಬಗ್ಗೆ ಕಿವಿಮಾತು ಹೇಳಿದರು.

ಶ್ರೀ ಹನುಮಂತರಾಯಪ್ಪ, ಬಿ.ಇ.ಒ. ಮುಖ್ಯ ಅತಿಥಿಯಾಗಿ ಭಾಗವಹಿಸಿದ್ದರು. ಸ್ಕೌಟ್ಸ್-ಗೈಡ್ಸ್ ಶಿಕ್ಷಕರು ತರಬೇತಿ ಪಡೆಯಬೇಕು ಹಾಗೂ ಶಾಲೆಗಳಲ್ಲಿ ಕಡ್ಡಾಯವಾಗಿ ದಳಗಳನ್ನು ತೆರೆಯಬೇಕು ಸ್ಕೌಟ್ಸ್-ಗೈಡ್ಸ್ ಗಳಿಗೆ ಉತ್ತಮ ಶಿಕ್ಷಣವನ್ನು ನೀಡಬೇಕು ಎಂದು ತಿಳಿಸಿದರು.

## ದಕ್ಷಿಣ ಕನ್ನಡ

ದಿನಾಂಕ 29-11-2016 ರಂದು ಮೊರಾರ್ಜಿ ದೇಸಾಯಿ ವಸತಿ ಶಾಲೆಯಲ್ಲಿ ಗೈಡ್ಸ್ ಘಟಕದ ಉದ್ಘಾಟನೆಯನ್ನು ಶ್ರೀ ಎನ್.ಜಿ. ಮೋಹನ್, ಜಿಲ್ಲಾ ಮುಖ್ಯ ಆಯುಕ್ತರು ಭಾರತ್ ಸ್ಕೌಟ್ಸ್-ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲೆ ಇವರು ದೀಪ ಬೆಳಗಿಸುವುದರ ಮೂಲಕ ನೆರವೇರಿಸಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯಲ್ಲಿ ಭಾಗವಹಿಸುವುದರಿಂದ ಉಂಟಾಗುವ ಪ್ರಯೋಜನಗಳ ಬಗ್ಗೆ ಮನವರಿಕೆ ಮಾಡಿದರು. ಈ ಕಾರ್ಯಕ್ರಮದ ಅಧ್ಯಕ್ಷರಾದ ಶ್ರೀ ಹಾಜಿ ಅಬ್ದುಲ್ ಲತೀಫ್ ಸಾಹೇಬ್, ಅಧ್ಯಕ್ಷರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಮದ್ಯಂತ್ಯಾರು ಇವರು ಘಟಕದ ಹೆಸರಿನ "ಕಲ್ಪನಾ ಚಾವ್ಲ" ಫಲಕವನ್ನು ಅನಾವರಣಗೊಳಿಸಿದರು. ಮುಖ್ಯ ಅತಿಥಿಗಳಾದ ಶ್ರೀ ರಾಮ್‌ಶೇಷ ಶೆಟ್ಟಿ, ಜಿಲ್ಲಾ ಸ್ಕೌಟ್ಸ್ ಆಯುಕ್ತರು, ದ.ಕ. ಜಿಲ್ಲೆ ಇವರು ಗೈಡ್ಸ್‌ಗಳಿಗೆ ಕಂಠವಸ್ತ್ರವನ್ನು ತೊಡಿಸುವುದರ ಮೂಲಕ ಸಾಂಕೇತಿಕವಾಗಿ ಗೈಡ್ಸ್ ಘಟಕಕ್ಕೆ ಚಾಲನೆ ನೀಡಿದರು. ಶ್ರೀಯುತ ರಘುಪತಿರಾವ್, ವಲಯ ಸಂಪನ್ಮೂಲ ವ್ಯಕ್ತಿ ಪುಂಜಾಲಕಟ್ಟೆ ಶ್ರೀ ವಾಸುದೇವ ಬೋಳೂರು, ಜಿಲ್ಲಾ ಕೋಶಾಧಿಕಾರಿ ಭಾರತ್ ಸ್ಕೌಟ್ಸ್-ಗೈಡ್ಸ್ ದ.ಕ. ಜಿಲ್ಲೆ, ಶ್ರೀ ಭರತ್ ರಾಜ್ ಜಿಲ್ಲಾ ಸಂಘಟಕರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದ.ಕ. ಜಿಲ್ಲೆ ಇವರು ಉಪಸ್ಥಿತರಿದ್ದರು. ಪ್ರಾಂಶುಪಾಲರಾದ ಶ್ರೀ ಗಣೇಶ್ ನಾಯ್ಕ್ ಇವರು ಪ್ರಾಸ್ತಾವಿಕ

ನುಡಿಗಳನ್ನು ನುಡಿದರು. ಶಿಕ್ಷಕರಾದ ಅಕ್ಷತಾ ಕೆ. ಇವರು ಸ್ವಾಗತಿಸಿ, ಶ್ರೀ ಶಾಂತಾರಾಮ ಪ್ರಭು ಕಾರ್ಯದರ್ಶಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ವಿಭಾಗ ಸ್ಥಳೀಯ ಸಂಸ್ಥೆ ಮಡಂತ್ಯಾರು, ಇವರು ವಂದನಾರ್ಪಣೆ ನೆರವೇರಿಸಿ, ಗೈಡ್ಸ್ ಕ್ಯಾಪ್ಟನ್ ಸುಪ್ರೀತಾ ಇವರು ನಿರೂಪಣೆಗೈದರು.

## ದಾವಣಗೆರೆ



ದಿನಾಂಕ 01-11-2016 ರಂದು ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಕರ್ನಾಟಕ ರಾಜ್ಯೋತ್ಸವ ಪಥಸಂಚಲನ ಕಾರ್ಯಕ್ರಮದಲ್ಲಿ ಸೆಂಟ್ ಪಾಲ್ಸ್ ಕಾನ್ವೆಂಟ್ ಹಿರಿಯ ಪ್ರಾಥಮಿಕ ಶಾಲೆಯ ಗೈಡ್ಸ್‌ಗಳು ಪ್ರಥಮ ಬಹುಮಾನ ಮತ್ತು ಪ್ರೌಢಶಾಲೆ ಗೈಡ್ಸ್‌ಗಳು ದ್ವಿತೀಯ ಬಹುಮಾನ ಪಡೆದರು. ಸಂಗೊಳ್ಳಿ ರಾಯಣ್ಣ ಓಪನ್ ರೋವರ್ ಕ್ರ್ಯೂ ಹಾಗೂ ಪ್ರಿಯದರ್ಶಿನಿ ರೇಂಜರ್ ಟೀಂನ ರೋವರ್ಸ್-ರೇಂಜರ್ಸ್‌ಗಳು ಪಥಚಲನೆಯಲ್ಲಿ ಭಾಗವಹಿಸಿ ತೃತೀಯ ಬಹುಮಾನ ಪಡೆದರು.

* ದಿನಾಂಕ 07-11-2016 ರಂದು ಧ್ವಜಚೀಟಿ ಬಿಡುಗಡೆ ಸಮಾರಂಭವನ್ನು ಉಪವಿಭಾಗಾಧಿಕಾರಿಗಳ ಕಛೇರಿಯಲ್ಲಿ ಏರ್ಪಡಿಸಲಾಗಿತ್ತು. ಉಪವಿಭಾಗಾಧಿಕಾರಿಗಳಾದ ಶ್ರೀ ಡಿ.ಟಿ. ಕುಮಾರಸ್ವಾಮಿ, ಧ್ವಜಚೀಟಿ ಬಿಡುಗಡೆ ಮಾಡಿದರು. ಈ ಸಂದರ್ಭದಲ್ಲಿ ಮಾಯಕೊಂಡ ಕ್ಷೇತ್ರದ ಶಾಸಕರಾದ ಶ್ರೀ ಶಿವಮೂರ್ತಿ ನಾಯಕ್, ಜಿಲ್ಲಾ ಸಂಸ್ಥೆ ಪದಾಧಿಕಾರಿಗಳಾದ ಶ್ರೀ ಎಸ್. ಶಂಕರ್‌ನಾಯ್ಕ್ ಜಿಲ್ಲಾ ಕಾರ್ಯದರ್ಶಿಗಳು, ಶ್ರೀ ಎನ್.ಡಿ. ತಮ್ಮಣ್ಣನವರ್, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್) ಶ್ರೀ ನೂರುಲ್ಲಾ ರಾಜ್ಯ ಸಹಾಯಕ ಸಂಘಟನಾ ಆಯುಕ್ತರು, ಶ್ರೀ ಟಿ.ಎಸ್. ಶಿವಣ್ಣ, ಜಿಲ್ಲಾ ಸಂಘಟಕರು(ಸ್ಕೌಟ್ಸ್) ಶ್ರೀ ಎ. ಶಿವಪ್ಪ, ಜಿಲ್ಲಾ ಸ್ಥಾನಿಕ ಆಯುಕ್ತರು, ಶ್ರೀ ಎಂ.ಪಿ. ಚಂದ್ರಪ್ಪ, ಜಿಲ್ಲಾ ಸಹಾಯಕ ಆಯುಕ್ತರು, ದಕ್ಷಿಣ ವಲಯ, ಕುಮಾರ ಪ್ರಿಯಾಂಕ ಹೆಚ್. ಎಂ. ಜಿಲ್ಲಾ ಸಂಘಟಕರು ಹಾಗು ಗೈಡ್ಸ್‌ಗಳು ಉಪಸ್ಥಿತರಿದ್ದರು.

## ಗದಗ

ದಿನಾಂಕ 08-12-2016 ರಂದು ಸರಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ ನಂ. 12, ಶ್ರೀ ಎಸ್.ಎಂ. ಕೃಷ್ಣನಗರ, ಬೆಟಗೇರಿ ಶಾಲೆಯಲ್ಲಿ ಸ್ಕೌಟ್‌ಗಳಿಗೆ ದೀಕ್ಷಾ ಸಮಾರಂಭ ನಡೆಸಲಾಯಿತು. ಸಮಾರಂಭದ ಅಧ್ಯಕ್ಷತೆಯನ್ನು ಶಾಲೆಯ ಎಸ್.ಪಿ.ಎಂ.ಸಿ. ಅಧ್ಯಕ್ಷರು ವಹಿಸಿದ್ದರು. ಉದ್ಘಾಟಕರಾಗಿ ಶ್ರೀ ಬೆನಕಪ್ಪ ಬಿ.ಇ.ಓ., ಶಹರ, ಗದಗ, ಭಾಗವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಗದಗ ಜಿಲ್ಲಾ ಜನಜಾಗೃತ ಸಂಘದ ಪದಾಧಿಕಾರಿಗಳು ಉಪಸ್ಥಿತರಿದ್ದರು. ಶ್ರೀ ಕಿಲಬನ್ನವರ, ಸ್ಥಳೀಯ ಸಂಸ್ಥೆ ಉಪಾಧ್ಯಕ್ಷರು ಗದಗ ಶಹರ, ಗೈಡ್ ಕ್ಯಾಪ್ಟನ್, ಸ್ಕೌಟ್ ಮಾಸ್ಟರ್ ಹಾಗೂ ಸ್ಕೌಟ್ಸ್‌ಗಳು ಶಾಲೆಯ ಮುಖ್ಯೋಪಾಧ್ಯಾಯರು ಹಾಗು ಸಿಬ್ಬಂದಿ ವರ್ಗ ಭಾಗವಹಿಸಿದ್ದರು.

* ದಿನಾಂಕ 19-11-2016 ರಂದು ಲೋಯಾಲ ಹಿರಿಯ ಪ್ರಾಥಮಿಕ ಶಾಲೆ ಬೇಟಗೇರಿಯ ಶಾಲೆಯ ಸ್ಕೌಟ್‌ಗಳಿಗೆ ದೀಕ್ಷಾ ಸಮಾರಂಭವನ್ನು ನಡೆಸಲಾಯಿತು. ಇದರ ಅಧ್ಯಕ್ಷತೆಯನ್ನು ಸಿಸ್ಟರ್ ವೆರೇನಿಕ ಶಾಲೆಯ ಮುಖ್ಯೋಪಾಧ್ಯಾಯರು ವಹಿಸಿದ್ದರು. ಶ್ರೀ ಜಿ.ಹೆಚ್. ಪೂಜಾರ, ಜಿಲ್ಲಾ ಕಾರ್ಯದರ್ಶಿ ಮಾತನಾಡುತ್ತಾ ದೀಕ್ಷಾ ಸಮಾರಂಭದ ಹಿನ್ನೆಲೆ, ಉದ್ದೇಶ ತಿಳಿಸಿದರು. ಶ್ರೀಮತಿ ಭಾಗೀರಥಿ ಪವಾರ್, ಜಿಲ್ಲಾ ತರಬೇತಿ ಆಯುಕ್ತರು ಮಾತನಾಡುತ್ತಾ ಪ್ರವೇಶದ ಪೂರ್ವ ಅಭ್ಯಾಸದ ನಂತರ ದೀಕ್ಷಾ ಸಮಾರಂಭ ಎಂದು ತಿಳಿಸಿದರು. ಅಧ್ಯಕ್ಷತೆ ವಹಿಸಿದ್ದ ಸಿಸ್ಟರ್ ವರೇನಿಕ ಮಾತನಾಡುತ್ತಾ ಸ್ಕೌಟ್ಸ್-ಗೈಡ್ಸ್ ಶಿಕ್ಷಣ ಇಂದಿನ ಜಗತ್ತಿಗೆ ಬೇಕಾಗಿದೆ ಎಂದು ತಿಳಿಸಿದರು. ಈ ಸಮಾರಂಭದಲ್ಲಿ ಸ್ಕೌಟ್ ಮಾಸ್ಟರ್‌ರಾದ ಶ್ರೀ ಜೋಸೆಫ್ ಕಝುಳಕೆ, ಗೈಡ್ ಕ್ಯಾಪ್ಟನ್ ಶ್ರೀಮತಿ ಮಾರ್ಗರೇಟ್, ಶಾಲೆಯ ಸಿಬ್ಬಂದಿ ಭಾಗವಹಿಸಿದ್ದರು.



* ದಿನಾಂಕ 23-11-2016 ರಂದು ಕೆ.ವಿ.ಎಸ್.ಆರ್.ವಿ. ಪಿ.ಯು. ಕಾಲೇಜ್ ತಿಮ್ಮಾಪುರ ರೋವರ್ಸ್‌ಗಳಿಂದ ಜನ ಜಾಗೃತಿ ಸೈಕಲ್ ಜಾಥಾವನ್ನು ನಡೆಸಲಾಯಿತು.

ಜನಜಾಗೃತಿ ಜಾಥಾದ ಉದ್ದೇಶ ಹಳ್ಳಿಗಳಲ್ಲಿ ಪರಿಸರದ ಬಗ್ಗೆ ಅರಿವು, ಶೌಚಾಲಯದ ಬಗ್ಗೆ ಅರಿವು ಮೂಡಿಸುವುದು. ಈ ಜನಜಾಗೃತಿ ಹಾಗೂ ಸೈಕಲ್ ಜಾಥಾವನ್ನು ಗ್ರಾಮ ಪಂಚಾಯತಿ ಅಧ್ಯಕ್ಷರಾದ ಶ್ರೀಮತಿ ರೇಣುಕಪ್ಪ ಸೋಂಪುರ ಉದ್ಘಾಟಿಸಿದರು. ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಆರ್.ಎನ್. ಗೌಡರ ಯು.ಎಸ್.ಆರ್. ಪ್ರೌಢಶಾಲೆ ಮುಖ್ಯ ಗುರುಗಳಾದ ಶ್ರೀ ಆರ್.ಪಿ. ಕುರುಡಗಿ, ಶ್ರೀ ಮಲ್ಲಿಕಾರ್ಜುನ, ಶ್ರೀ ನಾಗಪ್ಪ ಎಮ್ಮಿ ಶ್ರೀ ಎಚ್.ಪಿ. ಒಸಾಪುರ, ಶ್ರೀ ಆರ್.ಬಿ. ಚವ್ಹಾಣ, ಶ್ರೀ ಶಾಂತಕುಮಾರ ಮಲ್ಲಾಪುರ, ರೋವರ ಸ್ಕೌಟ್ ಲೀಡರ್ ಭಾಗವಹಿಸಿದ್ದರು.

* ದಿನಾಂಕ 20-11-2016 ರಂದು ಕೆನರಾ ಬ್ಯಾಂಕ್ ಎ.ಟಿ.ಎಂ. ಮುಂಡರಗಿ ಹಾಗೂ ದಿನಾಂಕ 21-11-2016 ರಂದು ಎಸ್.ಬಿ.ಐ., ಎ.ಟಿ.ಎಂ. ಮತ್ತು ಬ್ಯಾಂಕ್‌ನಲ್ಲಿ ಹೊಸ ನೋಟುಗಳ ವಿತರಣಾ ಕಾರ್ಯದಲ್ಲಿ ಕೆ.ವಿ.ಎಸ್.ಆರ್. ಪದವಿಪೂರ್ವ ಕಾಲೇಜಿನ ತಿಮ್ಮಾಪುರ ರೋವರ್ಸ್‌ಗಳು ಸೇವೆಯನ್ನು ಮಾಡಿರುತ್ತಾರೆ.

* ದಿನಾಂಕ 07-12-2016 ರಂದು ರಾತ್ರಿ 9.00 ಗಂಟೆಗೆ ಗದಗದಿಂದ ಕರ್ನಾಟಕ ದರ್ಶನಕ್ಕೆ 2 ಬಸ್ಸುಗಳಲ್ಲಿ ಹೊರಟು ದಿನಾಂಕ 12-12-2016 ರಂದು ಮರಳಿ ಗದಗಿಗೆ ತಲುಪಲಾಯಿತು. ಈ ಪ್ರವಾಸದಲ್ಲಿ ಶಿಬಿರಾಗ್ನಿ, ಚಿತ್ರಕಲೆ, ಪ್ರಬಂಧಸ್ಪರ್ಧೆಗಳನ್ನು ನಡೆಸಿ ಬಹುಮಾನಗಳನ್ನು ನೀಡಲಾಯಿತು. ಪ್ರವಾಸದ ಉದ್ಘಾಟನೆಯನ್ನು ಮಾನ್ಯ ಜಿ. ರುದ್ರಪ್ಪ, ಡಿ.ಡಿ.ಪಿ.ಐ., ಸಾ.ಶಿ.ಇ. ಗದಗ ನೆರವೇರಿಸಿದರು. ಶ್ರೀ ಬಾರಟಕ್ಕಿ ಎಸ್.ಎಸ್.ಎ., ಡಿ.ಡಿ.ಪಿ.ಐ., ಶ್ರೀಮತಿ ಸುಮಾ ಗರಗ, ಜಿಲ್ಲಾ ಆಯುಕ್ತರು, ಶ್ರೀ ಜಿ.ಎಂ. ಪ್ರಾಜ್ಞಾ, ಜಿಲ್ಲಾ ಕಾರ್ಯದರ್ಶಿ ಹಾಗೂ ಜಿಲ್ಲೆಯ ಎಲ್ಲಾ ಪದಾಧಿಕಾರಿಗಳು, ಕಾರ್ಯದರ್ಶಿಗಳು, ಬೀಳ್ಕೊಡಲು ಭಾಗವಹಿಸಿದ್ದರು.



## ಹಾಸನ

ದಿನಾಂಕ 03-10-2016 ರಂದು ಹಾಸನ ನಗರದ ಎ.ವಿ.ಕೆ. ಪ್ರ.ದ. ಕಾಲೇಜಿನ 'ಸ್ಫೂರ್ತಿ ರೇಂಜರ್ ಟೀಮ್' ವತಿಯಿಂದ ಅರಸೀಕೆರೆ ತಾಲ್ಲೂಕಿನ ನಾಗಪುರಿ ಗುಡ್ಡಕ್ಕೆ ಒಂದು ದಿನದ ಚಾರಣವನ್ನು ಹಮ್ಮಿಕೊಳ್ಳಲಾಗಿತ್ತು. ಈ ಚಾರಣದಲ್ಲಿ 16 ಕಿ.ಮೀ. ಗಳಷ್ಟು ದೂರ ಕಾಲ್ನಡಿಗೆಯಲ್ಲಿ 30 ರೇಂಜರ್‌ಗಳು ನಾಗಪುರಿ ಗುಡ್ಡವನ್ನು ಹತ್ತಿದರು. ಈ ಚಾರಣವನ್ನು ಕಾಲೇಜಿನ ರೇಂಜರ್ ಲೀಡರ್ ಶ್ರೀಮತಿ ಹೇಮಾವತಿ ವ್ಯವಸ್ಥೆಗೊಳಿಸಿದ್ದರು. ಸಂಪನ್ಮೂಲ ವ್ಯಕ್ತಿಗಳಾಗಿ ಡಿಟಿಸಿ(ಗೈಡ್ಸ್) ಕಾಮೇಶ್ವರಿ ಭಟ್ ಮತ್ತು ಡಿಒಸಿ(ಸ್ಕೌಟ್) ಶ್ರೀ ಜೆ.ಎಲ್. ಲೀಲಾಮಹೇಶ್ವರ ಭಾಗವಹಿಸಿದ್ದರು.

* ದಿನಾಂಕ 01-11-2016 ರಂದು ಹಾಸನದ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಕನ್ನಡ ರಾಜ್ಯೋತ್ಸವ ಕಾರ್ಯಕ್ರಮದಲ್ಲಿ ಹಾಸನ ನಗರದ ಶಾಲೆಗಳ ಸ್ಕೌಟ್ಸ್-ಗೈಡ್ಸ್‌ಗಳು ಪಥಸಂಚಲನದಲ್ಲಿ ಭಾಗವಹಿಸಿದ್ದರು.

* ದಿನಾಂಕ 01-11-2016 ರಂದು ಅರಸೀಕೆಯಲ್ಲಿ ನಡೆದ ಕನ್ನಡ ರಾಜ್ಯೋತ್ಸವ ಕಾರ್ಯಕ್ರಮದಲ್ಲಿ ರಾಜ್ಯ ಪುರಸ್ಕಾರ ಪಡೆದಿರುವ ಮುರುಂಡಿಯ ಸ.ಪ್ರೌ.ಶಾಲೆ, ಮತ್ತು ಗಂಡಸಿ ಸಂತೆಮೈದಾನದ ಸ.ಪ್ರೌ.ಶಾಲೆಯ ಗೈಡ್‌ಗಳನ್ನು ತಾಲ್ಲೂಕು ಆಡಳಿತ ವತಿಯಿಂದ ಸನ್ಮಾನಿಸಲಾಯಿತು.

* ದಿನಾಂಕ 12-11-2016 ರಂದು ಹಾಸನ ನಗರದ ಪ್ರಧಾನ ಪ.ಪೂ. (ಮಹಿಳಾ) ಕಾಲೇಜ್‌ನಲ್ಲಿ ರೇಂಜರ್ ಘಟಕ ಪ್ರಾರಂಭಿಸಲು ಪೂರ್ವಭಾವಿಯಾಗಿ ನಡೆದ 'ವಿಶ್ವ ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಅಭಿವಿನ್ಯಾಸ' ಕಾಯಕ್ರಮದಲ್ಲಿ ಜಿಲ್ಲಾ ಸಂಘಟಕ(ಸ್ಕೌಟ್ಸ್) ಶ್ರೀ ಜೆ. ಎಲ್. ಲೀಲಾಮಹೇಶ್ವರ ಮತ್ತು ಜಿಲ್ಲಾ ಸಂಘಟಕ(ಗೈಡ್ಸ್) ಶ್ರೀಮತಿ ಲೀಲಾವತಿಯವರು ಜಿಲ್ಲಾ ಸಂಸ್ಥೆ ವತಿಯಿಂದ ಭಾಗವಹಿಸಿದ್ದರು.

## ಹಾವೇರಿ



ದಿನಾಂಕ 08-12-2016 ರಿಂದ 09-12-2016 ರ ವರೆಗೆ ರಾಣೀಬೆನ್ನೂರು ತಾಲೂಕು ಸಂಸ್ಥೆಯ ಆಶ್ರಯದಲ್ಲಿ ಗುಂಪು ನಾಯಕ ತರಬೇತಿ ಶಿಬಿರವನ್ನು ಶಾಸಕರ ಮಾದರಿ ಪ್ರಾಥಮಿಕ ಶಾಲೆ ರಾಣೀಬೆನ್ನೂರಿನಲ್ಲಿ ನಡೆಸಲಾಯಿತು. ಶಿಬಿರದ ಉದ್ಘಾಟನೆಯನ್ನು ಶ್ರೀಮತಿ ಶೋಭಾ ಕರ್ಜಗಿ, ಜಿಲ್ಲಾ ಗೈಡ್ ಆಯುಕ್ತರು ಮಾಡಿದರು. ಅತಿಥಿಗಳಾಗಿ ಶ್ರೀ ಹೊರಳಿ, ವಿಷಯ ಪರೀಕ್ಷಕರು, ಶ್ರೀ ಎ.ಬಿ. ಚಂದ್ರಶೇಖರ ಪಿ.ಇ.ಓ. ಶ್ರೀ ದೇವಗಿರಿಮಠ ತಾಲೂಕ ಕಾರ್ಯದರ್ಶಿ, ಆಜೀವ ಸದಸ್ಯರು ಭಾಗವಹಿಸಿದ್ದರು. ಶಿಬಿರದಲ್ಲಿ 125 ಸ್ಕೌಟ್ಸ್, 90 ಗೈಡ್ಸ್, 18 ಸ್ಕೌಟರ್ಸ್ ಮತ್ತು ಗೈಡರ್ಸ್ ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಶ್ರೀ ಎ.ಎಲ್. ಶೇಖಸೂರಣಗಿ ಡಿ.ಓ.ಸಿ ಕಾರ್ಯ ನಿರ್ವಹಿಸಿದ್ದರು.

## ಕಾರವಾರ

ದಿನಾಂಕ 30-11-2016 ರಂದು ಶ್ರೀನಾದ ಕಲಾಕೇಂದ್ರ, ಕುಮಟಾ ಇಲ್ಲಿ ಜಿಲ್ಲಾ ಸಂಸ್ಥೆ ಹಾಗೂ ಕುಮಟಾ ಸ್ಥಳೀಯ ಸಂಸ್ಥೆ ಸಹಯೋಗದೊಂದಿಗೆ ಜಿಲ್ಲಾ ಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್ ಶಿಕ್ಷಕರ ಸಮಾವೇಶ ಜರುಗಿತು.



ಸಮಾವೇಶದ ಉದ್ಘಾಟನೆಯನ್ನು ಶ್ರೀ ಈಶ್ವರ ನಾಯ್ಕ ಉಪ ನಿರ್ದೇಶಕರು (ಅಭಿವೃದ್ಧಿ) ಸಾರ್ವಜನಿಕ ಶಿಕ್ಷಣ ಇಲಾಖೆ ಡಯಟ್ ಕುಮಟಾ (ಉ.ಕ.) ರವರು ಜ್ಯೋತಿ ಬೆಳಗಿಸುವದರೊಂದಿಗೆ ನೆರವೇರಿಸಿದರು. ಅಧ್ಯಕ್ಷತೆಯನ್ನು ಶ್ರೀ ಅತುಲ ಕಾಮತ್, ಉದ್ಯಮಿ ಹಾಗೂ ಅಧ್ಯಕ್ಷರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಕುಮಟಾ, ವಹಿಸಿದ್ದು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ಜಿ.ಜಿ. ಸಭಾಹಿತ್, ಕ್ಷೇತ್ರಶಿಕ್ಷಣಾಧಿಕಾರಿಗಳಾದ ಶ್ರೀ ಶಾಂತೇಶ ನಾಯಕ, ರಾಜ್ಯ ಸಂಯೋಜಕರಾದ ಶ್ರೀಮತಿ ಜಾನಕಿ ವೇಣುಗೋಪಾಲ, ಜಿಲ್ಲಾ ಉಪಾಧ್ಯಕ್ಷರಾದ ಶ್ರೀ ಎಸ್.ಎಸ್. ಭಟ್ಟ ಲೋಕೇಶ್ವರ ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.

ಶ್ರೀ ನಾಗೇಶ ಆರ್. ಶಿವಪೂರ ಸಹಾಯಕ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್) ಪ್ರಾಸ್ತಾವಿಕ ನುಡಿ ನುಡಿದರು. ಶ್ರೀ ಬಿ.ಡಿ. ಫರ್ನಾಂಡೀಸ್, ಜಿಲ್ಲಾ ಕಾರ್ಯದರ್ಶಿಗಳು ವಂದಿಸಿದರು. ಒಟ್ಟು 101 ಸ್ಕೌಟರ್ಸ್ ಮತ್ತು ಗೈಡರ್ಸ್ ಭಾಗವಹಿಸಿದ್ದರು.

# ಕೋಲಾರ

ದಿನಾಂಕ 09-10-2016 ರಿಂದ 10-10-2016 ರ ವರೆಗೆ ಕೆ.ಜಿ.ಎಫ್ ಸಮೀಪದ ಪೋಲೇರಹಳ್ಳಿಯಲ್ಲಿನ ಶ್ರೀ ಆಂಜನೇಯ ಸ್ವಾಮಿ ದೇವಾಲಯದಲ್ಲಿ 7ನೇ ಜಿಲ್ಲಾ ವೃಕ್ಷಮಣಿಧಾರಕರ ಸಮಾವೇಶವನ್ನು ನಡೆಸಲಾಯಿತು. ಈ ಸಮಾವೇಶಕ್ಕೆ ನಾಯಕರಾಗಿ ಶ್ರೀ ವಿ.ಎಂ. ನಾರಾಯಣಸ್ವಾಮಿ ಕಾರ್ಯನಿರ್ವಹಿಸಿದ್ದರು. ಶಿಬಿರದ ಉದ್ಘಾಟನೆಯನ್ನು ಸಹಾಯಕ ಆಯುಕ್ತರಾದ ಶ್ರೀ ಕೆ.ಆರ್. ಸುರೇಶ್ ನೆರವೇರಿಸಿದರು. ಈ ಶಿಬಿರದಲ್ಲಿ ಎ.ಪಿ.ಆರ್.ಓ., ದಲ್ಲಿನ ಬದಲಾವಣೆಗಳು, ರಾಜ್ಯ ಪುರಸ್ಕಾರ ಮತ್ತು ರಾಷ್ಟ್ರಪತಿ ಪುರಸ್ಕಾರ ಅರ್ಜಿಗಳನ್ನು ಭರ್ತಿ ಮಾಡುವಾಗ ಗಮನಿಸಬೇಕಾದ ಅಂಶಗಳು, ಪ್ರಧಾನ ಮಂತ್ರಿ ಪಾರಿತೋಷಕದ ಅರ್ಜಿ, ನಾಯಕ ತರಬೇತಿ ರಾಷ್ಟ್ರೀಯ ಜಾಂಬೂರಿ, ಮೂಲತರಬೇತಿ ಮುಂತಾದ ವಿಷಯಗಳ ಬಗ್ಗೆ ಚರ್ಚಿಸಲಾಯಿತು. ಶ್ರೀ ಕೆ. ಬಾಬು, ಶ್ರೀ ರಚನ್‌ದಾಸ್, ಶ್ರೀ ವೀನಸ್, ಶ್ರೀ ಪ್ರಭುರಮ್, ಶ್ರೀ ಅಫ್ರೋಜ್ ಖಾನಂ ಭಾಗವಹಿಸಿದ್ದರು. ಇದೇ ಸಂದರ್ಭದಲ್ಲಿ ಜೈನ್ ಇಂಟರ್‌ನ್ಯಾಷನಲ್ ಶಾಲೆಯ ಶಿಕ್ಷಕರಾದ ಶ್ರೀ ತ್ರಿವಿಕ್ರಮ್‌ರವರಿಗೆ ಹಿಮಾಲಯ ವೃಕ್ಷಮಣಿಗಳನ್ನು ಮತ್ತು ಪ್ರಮಾಣ ಪತ್ರವನ್ನು ನೀಡಲಾಯಿತು.



* ದಿನಾಂಕ 23-11-2016 ರಿಂದ 27-11-2016 ರ ವರೆಗೆ ಜಿಲ್ಲೆಯ ಸ್ಕೌಟ್ಸ್-ಗೈಡ್ಸ್‌ಗಳಿಗೆ ಕರ್ನಾಟಕ ದರ್ಶನವನ್ನು ಆಯೋಜಿಸಿ ರಾಜ್ಯದ ವಾಣಿವಿಲಾಸ ಸಾಗರ, ಚಿತ್ರದುರ್ಗ, ಟಿ.ಬಿ.ಡ್ಯಾಂ, ಹಂಪೆ, ಐಹೊಳೆ, ಪಟ್ಟದಕಲ್ಲು, ಬಾದಾಮಿ, ಆಲಮಟ್ಟಿ ಜಲಾಶಯ, ಬಸವನ ಬಾಗೇವಾಡಿ, ವಿಜಾಪುರ, ಕೂಡಲಸಂಗಮ, ಮಹಾಕೂಟ, ಶಿವರಗಿ, ಬನಶಂಕರಿ, ಮುಂತಾದ ಪ್ರೇಕ್ಷಣೀಯ ಸ್ಥಳಗಳನ್ನು ಪರಿಚಯಿಸಲಾಯಿತು.

* ದಿನಾಂಕ 30-12-2016 ರಂದು ಕೋಲಾರ ಸ್ಥಳೀಯ ಸಂಸ್ಥೆಯ ವತಿಯಿಂದ ರಾಷ್ಟ್ರೀಯ ಏಕತಾ ದಿನಾಚರಣೆಯನ್ನು ಆಚರಿಸಲಾಯಿತು. ಕಛೇರಿ ಆವರಣದಲ್ಲಿ ಜಿಲ್ಲಾ ಪಂಚಾಯತ್ ಸದಸ್ಯರಾದ ಶ್ರೀ ನಂಜುಂಡಪ್ಪನವರು ಸರ್ದಾರ್ ವಲ್ಲಭ ಬಾಯಿ ಪಟೇಲರ ಭಾವಚಿತ್ರಕ್ಕೆ ಪುಷ್ಪಗಳನ್ನು ಅರ್ಪಿಸುವುದರ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳಿಗೆ ದೇಶದ ಏಕತೆಯನ್ನು ಕಟ್ಟುವಲ್ಲಿ ಯುವಕರ ಪಾತ್ರ ಎಂಬ ವಿಷಯದ ಬಗ್ಗೆ ಸಂವಾದ ವನ್ನು ಏರ್ಪಡಿಸಲಾಗಿತ್ತು.

ಕೊಲಾರ ಜಿಲ್ಲೆ ಗಡಿ ಭಾಗದಲ್ಲಿದ್ದರು ಸಹ ನಾವು ಇತರ ಭಾಷೆಯ ಪ್ರಭಾವಕ್ಕೆ ಒಳಗಾಗದೆ ನಮ್ಮ ಮಾತೃಭಾಷೆಯಾದ ಕನ್ನಡ ಭಾಷೆ ಜೊತೆಗೆ ನಾಡಿನ ಕಲೆ, ಸಂಸ್ಕೃತಿ, ಸಾಹಿತ್ಯವನ್ನು ಉಳಿಸಿ ಬೆಳೆಸುವಂತಹ ಕೆಲಸಕ್ಕೆ ಯುವ ಸಮುದಾಯ ಕೈ ಜೋಡಿಸಬೇಕಾಗಿದೆ ಎಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಕಛೇರಿ ಆವರಣದಲ್ಲಿ ಜರುಗಿದ ಕನ್ನಡ ರಾಜ್ಯೋತ್ಸವದಲ್ಲಿ ತಾಯಿ ಭುವನೇಶ್ವರಿ ದೇವಿಗೆ ಪೂಜೆ ಸಲ್ಲಿಸಿ ಸ್ತಬ್ಧ ಚಿತ್ರ ಮೆರವಣಿಗೆಗೆ ಚಾಲನೆ ನೀಡಿದ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ. ಪಿ. ಶಂಕರಪ್ಪ ರವರು ಮಾತನಾಡಿದರು.

ಮೆರವಣಿಗೆಯಲ್ಲಿ ಸಾಹಿತಿಗಳ, ರಾಜರುಗಳ, ಹುಲಿ ವೇಷ, ಕೋಲಾಟ ತಂಡಗಳು, ವೇಷಭೂಷಣಗಳೊಂದಿಗೆ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಚಟುವಟಿಕೆಗಳನ್ನು ಬಿಂಬಿಸುವ ಛಾಯ ಚಿತ್ರಗಳ ಫ್ಲೆಕ್ಸ್‌ಗಳಿಂದ ಜನರಿಗೆ ಅರಿವು ಮೂಡಿಸಲಾಯಿತು.



* ದಿನಾಂಕ 04-11-2016 ರಂದು ಕೋಲಾರ ನಗರದ ಸರ್ಕಾರಿ ಬಾಲಕರ ಪದವಿ ಪೂರ್ವ ಕಾಲೇಜಿನಲ್ಲಿ ಸ್ಕೌಟ್ಸ್-ಗೈಡ್ಸ್ ಧ್ವಜ ದಿನಾಚರಣೆಯನ್ನು ಹಮ್ಮಿಕೊಳ್ಳಲಾಗಿತ್ತು. ಕಾಲೇಜಿನ ಪ್ರಾಂಶುಪಾಲರಾದ ಶ್ರೀ ವೆಂಕಟಸ್ವಾಮಿ ರವರು ಧ್ವಜ ಸ್ಟಿಕ್ಕರ್‌ಗಳನ್ನು ಬಿಡುಗಡೆ ಮಾಡಿ ಸಂಸ್ಥೆಯ ತತ್ವಗಳು ಇಡೀ ವಿಶ್ವಕ್ಕೆ ಶಾಂತಿಯ ಸಂದೇಶ ಮತ್ತು ಅಭಿವೃದ್ಧಿ

ಕಾಣಲು ಸೇವಾ ಮನೋಭಾವದಿಂದ ದುಡಿಯುತ್ತಿದೆ. ಇಂತಹ ಸಂಸ್ಥೆಗೆ ನಮ್ಮ ಸಹಕಾರ ಸದಾ ಸಿಗಲಿದೆ, ಮತ್ತಷ್ಟು ಪ್ರಗತಿ ಕಾಣಲಿ ಎಂದು ಹಾರೈಸಿದರು. ಈ ಸಮಾರಂಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶಂಕರಪ್ಪ ರವರು ಮಾತನಾಡಿ ಸಂಸ್ಥೆಯ ಬೆಳವಣಿಗೆಗೆ ನನ್ನ ಸಹಕಾರ ಸದಾ ಸಿಗಲಿದೆ ಎಂದರು. ಜಿಲ್ಲಾ ನೋಡಲ್ ಅಧಿಕಾರಿಗಳಾದ ಶ್ರೀ ಮೈಲಾರಪ್ಪ ರವರು ಮಾತನಾಡಿ ಸಂಸ್ಥೆಯ ಬೆಳವಣಿಗೆಗೆ ನನ್ನ ಸಹಕಾರ ಸದಾ ಸಿಗಲಿದೆ. ಮತ್ತಷ್ಟು ಪ್ರಗತಿ ಕಾಣಲಿ ಎಂದು ಹಾರೈಸಿದರು.

* ದಿನಾಂಕ 7-11-2016 ರಂದು ಧ್ವಜದಿನಾಚರಣೆಯನ್ನು ಕೋಲಾರ ಸ್ಥಳೀಯ ಸಂಸ್ಥೆ ವತಿಯಿಂದ ನರಸಾಪುರ ಸಮೀಪದ ಪ್ರೇಮ ಶಾಲೆಯಲ್ಲಿ ನಡೆಸಲಾಯಿತು. ಶಾಲೆಯ ಪ್ರಾಂಶುಪಾಲರಾದ ಶ್ರೀ ಸುಗಮಾರ್, ಬಿ.ಆರ್.ಪಿ. ಶ್ರೀಮತಿ ಸವಿತ. ಎಮ್, ಸಿ.ಆರ್.ಪಿ. ಶ್ರೀ ಸಿ.ವಿ. ನಾಗರಾಜ್ ರವದು ಧ್ವಜ ಸ್ಟಿಕ್ಕರ್‌ಗಳನ್ನು ಬಿಡುಗಡೆ ಮಾಡಿದರು.

* ದಿನಾಂಕ 8-11-2016 ರಂದು ಬಂಗಾರಪೇಟೆ ಸ್ಥಳೀಯ ಸಂಸ್ಥೆ ವತಿಯಿಂದ ಜೈನ್ ಗ್ಲೋಬಲ್ ಶಾಲೆಯ ವ್ಯವಸ್ಥಾಪಕರಾದ ಶ್ರೀ ಪ್ರದೀಪ್ ಜೈನ್ ಮತ್ತು ಪ್ರಾಂಶುಪಾಲರಾದ ಶ್ರೀಮತಿ ಚಂದ್ರಕಾ ಕೃಷ್ಣ ರವರು ಧ್ವಜ ಸ್ಟಿಕ್ಕರ್‌ಗಳನ್ನು ಬಿಡುಗಡೆ ಮಾಡಿದರು.

* ದಿನಾಂಕ 19-11-2016 ರಿಂದ 21-11-2016ರ ವರೆಗೆ ಕೋಲಾರ ತಾಲ್ಲೂಕಿನ ವಿಟ್ಟಪನಹಳ್ಳಿ ಶಾಲೆಯಲ್ಲಿ ನಿಪುಣ್ ಪರಿಕ್ಷಾ ಶಿಬಿರವನ್ನು ಆಯೋಜಿಸಲಾಗಿತ್ತು. ಶಿಬಿರದ ನಾಯಕರಾಗಿ ಶ್ರೀ ಕೆ.ಆರ್. ಸುರೇಶ್, ನಾಯಕಿಯಾಗಿ ಮಹಿಳಾ ಕಾಲೇಜಿನ ಉಪನ್ಯಾಸಕಿಯಾದ ಶ್ರೀಮತಿ ಕೆ.ಆರ್. ಮಂಜುಳ ರವರು ಕಾರ್ಯನಿರ್ವಹಿಸಿದರು. ಶಿಬಿರದ ಉದ್ಘಾಟನೆಯನ್ನು ಅಧ್ಯಕ್ಷರಾದ ಶ್ರೀ ಬಿಸಪ್ಪ ಗೌಡ, ಉಪಾಧ್ಯಕ್ಷರಾದ ಶ್ರೀ ಗೋಪಾಲರೆಡ್ಡಿ ನೆರವೇರಿಸಿದರು. ಸಮಾರೋಪ ಸಮಾರಂಭ ಅಧ್ಯಕ್ಷತೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ ರವರು ನಿರ್ವಹಿಸಿದರು. ಈ ಶಿಬಿರದಲ್ಲಿ ಅಗ್ನಿಶಾಮಕ ದಳದ ವತಿಯಿಂದ ಬೆಂಕಿಯು ಅನಾಹುತಗಳಾದಾಗ ತೆಗೆದುಕೊಳ್ಳಬೇಕಾದ ಕ್ರಮಗಳ ಬಗ್ಗೆ ಪ್ರಾಯೋಗಿಕ ತರಬೇತಿಯನ್ನು ಅಗ್ನಿಶಾಮಕ ದಳದ ಅಧಿಕಾರಿಯಾದ ಶ್ರೀ ಮಾದೇಶ್ ಮತ್ತು ತಂಡದವರು ನಡೆಸಿಕೊಟ್ಟರು.

## ಮಂಡ್ಯ

ದಿನಾಂಕ 03-12-2016 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಮಂಡ್ಯ ವತಿಯಿಂದ ಸ॥ ಪ್ರೌಢಶಾಲೆ ಗೆಜ್ಜಲಗೆರೆಯ ಗೈಡ್ಸ್‌ಗಳಿಗಾಗಿ ಹೊರಸಂಚಾರ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಗೈಡ್ಸ್ ಕ್ಯಾಪ್ಟನ್ ಶ್ರೀಮತಿ ಶಿವಕುಮಾರಿರವರು ಕಾರ್ಯಕ್ರಮ ವ್ಯವಸ್ಥೆಗೊಳಿಸಿದ್ದರು. ಮುಖ್ಯ ಶಿಕ್ಷಕರಾದ ಶ್ರೀ ಮಂಜಪ್ಪರವರು ಮಾರ್ಗದರ್ಶನ ನೀಡಿದರು. ಮುಖ್ಯ ಆಯುಕ್ತರಾದ ಶ್ರೀಮತಿ ಮೀರಾ ಶಿವಲಿಂಗಯ್ಯ ರವರು ಉತ್ತಮ ಮಾರ್ಗದರ್ಶನ ನೀಡಿದರು. ಜಿಲ್ಲಾ ಸಂಘಟಕರಾದ ಶ್ರೀ ಬಿ.ಎಂ. ಲೋಕೇಶ್ (ಸ್ಕೌಟ್ಸ್) ಮತ್ತು ಶ್ರೀಮತಿ ಕೆ.ಎಂ. ನಾಗರತ್ನ ಶ್ರೀ ಟಿ. ರವಿಶಂಕರ ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀ ರಂಗಸ್ವಾಮಿರವರು ಸಹಕರಿಸಿದರು.

* ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ 17ನೇ ರಾಷ್ಟ್ರೀಯ ಜಾಂಬೂರಿಯು ಮೈಸೂರಿನಲ್ಲಿ ನಡೆಯಲಿದ್ದು, ಇದರ ಅಂಗವಾಗಿ ಬೆಂಗಳೂರಿನಿಂದ ಮೈಸೂರಿನ ವರೆಗೆ ಬೈಕ್ ರ್‍ಯಾಲಿಯಲ್ಲಿ ಆಗಮಿಸಿದವರನ್ನು ಜಿಲ್ಲಾ ಪದಾಧಿಕಾರಿಗಳು ಶನಿವಾರ ನಗರದಲ್ಲಿ ಸ್ವಾಗತಿಸಿದರು. ಭಾರತ್ ಸ್ಕೌಟ್ಸ್‌ನ ರಾಜ್ಯ ಯುವ ಸಮಿತಿ ಅಧ್ಯಕ್ಷರು ಕು. ಮೇಘನಾ ಮಾತನಾಡಿ, ಸ್ಕೌಟ್ಸ್ ಅಂಡ್ ಗೈಡ್ಸ್ ಸಂಸ್ಥೆಯು 40 ಮಿಲಿಯನ್‌ಗೂ ಹೆಚ್ಚಿನ ಸದಸ್ಯರನ್ನು ಹೊಂದಿದೆ ಎಂದರು.

ಭಾರತದಲ್ಲಿ 17ನೇ ರಾಷ್ಟ್ರೀಯ ಜಾಂಬೋರಿ ಮೈಸೂರಿನಲ್ಲಿ ಡಿ. 29 ರಿಂದ ಜ. 4 ವರೆಗೆ ನಡೆಯಲಿದ್ದು, ಡಿ. 29 ರಂದು ರಾಷ್ಟ್ರಪತಿ ಪ್ರಣಬ್ ಮುಖರ್ಜಿ ಸಮಾರಂಭ ಉದ್ಘಾಟಿಸಲಿದ್ದಾರೆ ಎಂದು ತಿಳಿಸಿದರು.

ದೇಶದಲ್ಲಿ ಎಲ್ಲಾ ರಾಜ್ಯಗಳಿಂದಲೂ 30 ಸಾವಿರಕ್ಕೂ ಹೆಚ್ಚು ಜನರು ಸೇರಿದಂತೆ 12 ರಿಂದ 17 ವರ್ಷದ ಮಕ್ಕಳೂ ಸಹ ಕಾರ್ಯಕ್ರಮದಲ್ಲಿ ಭಾಗವಹಿಸಲಿದ್ದಾರೆ. ಸಾಂಸ್ಕೃತಿಕ ಹಾಗೂ ಸಾಹಸಮಯ ಚಟುವಟಿಕೆಗಳು ಸೇರಿದಂತೆ ವಿವಿಧ ಕಾರ್ಯಕ್ರಮಗಳು ನಡೆಯಲಿವೆ ಎಂದು ಹೇಳಿದರು.



ಜಿಲ್ಲಾ ಪದಾಧಿಕಾರಿಗಳು, ಶ್ರೀ ಲೋಕೇಶ್ ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.

## ರಾಯಚೂರು

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆಯು ಜಿಲ್ಲಾ ಸ್ಕೌಟ್ ಭವನದಲ್ಲಿ www.bsgraichur.org ಹೆಸರಿನಲ್ಲಿ ಅಂತರ್ಜಾಲ ತಾಣವನ್ನು ಸಿದ್ಧಪಡಿಸಿದೆ. ತಾಣವನ್ನು ಶ್ರೀ ಕೆ. ತಿಮ್ಮಯ್ಯ ಜಿಲ್ಲಾ ಮುಖ್ಯ ಆಯುಕ್ತರು ಗುಂಡಿಯನ್ನು ಒತ್ತುವುದರ ಮೂಲಕ ಉದ್ಘಾಟಿಸಿದರು. ನಂತರ ಅವರು ಮಾತನಾಡಿ, ರಾಯಚೂರು ಜಿಲ್ಲೆಯು ಸ್ಕೌಟ್ಸ್-ಗೈಡ್ಸ್ ಚಳುವಳಿಯನ್ನು ಪ್ರತಿಯೊಬ್ಬರಿಗೂ ಪರಿಚಯಿಸಲು ಈ ಅಂತರ್ಜಾಲ ತಾಣ ಸಹಕಾರಿಯಾಗಲಿದೆ ಹಾಗೂ ಅಂತರ ರಾಷ್ಟ್ರೀಯ ಮಟ್ಟದಲ್ಲಿ ಸಂಸ್ಥೆಯನ್ನು ಗುರುತಿಸಲು ಅನುಕೂಲವಾಗುತ್ತದೆ ಎಂದು ಹೇಳಿದರು. ಈ ಅಂತರ್ಜಾಲ ತಾಣವನ್ನು ರಾಯಚೂರು ನಗರದ ಶ್ರೀ ಅಮೀತ್ ದಂಡಿನ್ ಇವರು ಸಿದ್ಧಪಡಿಸಿ ಸಹಕರಿಸಿರುತ್ತಾರೆ. ಅಂತರ್ಜಾಲ ಹೊಂದಿರುವ ಕರ್ನಾಟಕ ರಾಜ್ಯದ ಮೊದಲ ಜಿಲ್ಲೆ ಇದಾಗಿದೆ.



ಈ ಸಂದರ್ಭದಲ್ಲಿ ಶ್ರೀ ಅಮರೇಗೌಡ ಪಾಟೀಲ್, ಜಿಲ್ಲಾ ಆಯುಕ್ತರು (ಸ್ಕೌಟ್), ಶ್ರೀಮತಿ ಅಜೀಜಾ ಸುಲ್ತಾನ್ ಜಿಲ್ಲಾ ಆಯುಕ್ತರು (ಗೈ), ಜಿಲ್ಲಾ ಖಜಾಂಚಿಗಳಾದ ಶ್ರೀಮತಿ ಕೆ. ಆಲಿಯಾ ಖಾನಂ, ಜಿಲ್ಲಾ ಸಂಘಟನಾ ಆಯುಕ್ತರಾದ ರಾವುತರಾವ್ ಬರೂರ, ಜಿಲ್ಲಾ ತರಬೇತಿ ಆಯುಕ್ತರುಗಳಾದ ಶ್ರೀ ಆರ್.ಹೆಚ್. ಸಾಗರ್, ಶ್ರೀಮತಿ ಎಮ್. ಶಾರದಾ ಸಂಸ್ಥೆಯ ಪದಾಧಿಕಾರಿಗಳು ಹಾಗೂ ಸ್ಕೌಟ್ ಮಾಸ್ಟರ್ಸ್, ಗೈಡ್ ಕ್ಯಾಪ್ಟನ್ನರು ಉಪಸ್ಥಿತರಿದ್ದರು.

* ದಿನಾಂಕ 08-11-2016 ರಿಂದ 10-11-2016 ರವರೆಗೆ ಜಿಲ್ಲಾ ಸ್ಕೌಟ್ಸ್ ಭವನದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಗಾಗಿ ರಂಗೋಲಿ ಸ್ಪರ್ಧೆ, ರಸಪ್ರಶ್ನೆ ಸ್ಪರ್ಧೆ ನಳಪಾಕ ಸ್ಪರ್ಧೆ ಹಾಗೂ ರಾಯಚೂರು ಕೇಂದ್ರ ರೈಲ್ವೇ ನಿಲ್ದಾಣದಲ್ಲಿ ದಕ್ಷಿಣ ಕೇಂದ್ರ ರೈಲ್ವೆ ಇವರ ಸಹಯೋಗದಲ್ಲಿ "ಸ್ವಚ್ಛ ಭಾರತ್" ಕಾಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು. ದಕ್ಷಿಣ ಕೇಂದ್ರ ರೈಲ್ವೆ, ರಾಯಚೂರು ಇವರ ಸಹಯೋಗದಲ್ಲಿ ನಗರದ ವಿವಿಧ ಶಾಲೆಗಳ 150ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್‌ಗಳು ರೈಲ್ವೆ ನಿಲ್ದಾಣದ ಸುತ್ತಮುತ್ತಲಿನ ಆವರಣದಲ್ಲಿ ಸ್ವಚ್ಛತಾ ಕಾರ್ಯಕ್ರಮವನ್ನು ಹಮ್ಮಿಕೊಂಡು ಜನರಲ್ಲಿ ಜಾಗೃತಿ ಮೂಡಿಸುವ ಕೆಲಸವನ್ನು ಮಾಡಿದರು. ಈ ಸಂದರ್ಭದಲ್ಲಿ ರೈಲ್ವೆ ನಿಲ್ದಾಣದ ವ್ಯವಸ್ಥಾಪಕರಾದ ಶ್ರೀ ಎಂ. ವಿವೇಕಾನಂದ, ರೈಲ್ವೆ ಐ.ಪಿ.ಎಸ್. ಶ್ರೀ ಸಂತೋಷಕುಮಾರ್ ರಾಯ್, ರೈಲ್ವೆ ವೈದ್ಯರಾದ ಡಾ॥ ವಾಜೀದ್, ಆರೋಗ್ಯ ನಿರೀಕ್ಷಕರಾದ ಮಿಥುನ್. ಎಸ್.ಎಸ್.ಸಿ. ನೋಡಲ್ ಅಧಿಕಾರಿ ಶ್ರೀ ಆರ್. ಗಾಂಧಿ ಉಪಸ್ಥಿತರಿದ್ದರು.

* ದಿನಾಂಕ 11-11-2016 ರಿಂದ 14-11-2016 ರವರೆಗೆ ಪ್ರಬಂಧ ಸ್ಪರ್ಧೆ, ರೈಲ್ವೆ ನಿಲ್ದಾಣದಿಂದ ಕೊಳಂಕಿವರೆಗೆ ಚಾರಣ ಹಮ್ಮಿಕೊಳ್ಳಲಾಯಿತು ಈ ಚಾರಣದಲ್ಲಿ 97 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಸ್ಕೌಟ್ ಭವನದಲ್ಲಿ ಸಮಾರೋಪ ಸಮಾರಂಭ ಹಾಗೂ ಮಕ್ಕಳ ದಿನಾಚರಣೆಯನ್ನು ಆಚರಿಸಲಾಯಿತು. ಈ ಸಪ್ತಾಹ ಕಾಯಕ್ರಮದಲ್ಲಿ 200 ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಶ್ರೀ ಹೆಚ್. ಹನುಮಂತಪ್ಪ ಜಿಲ್ಲಾ ಕಾರ್ಯದರ್ಶಿಗಳು, ಶ್ರೀ ಅಮರೇಗೌಡ ಪಾಟೀಲ್ ಜಿಲ್ಲಾ ಆಯುಕ್ತರು(ಸ್ಕೌ) ಶ್ರೀಮತಿ ಅಜೀಜಾ ಸುಲ್ತಾನ ಜಿಲ್ಲಾ ಆಯುಕ್ತರು(ಗೈ).

ಶ್ರೀಮತಿ ಕೆ. ಆಲಿಯಾ ಖಾನಂ, ಜಿಲ್ಲಾ ಖಜಾಂಚಿಗಳು, ಶ್ರೀ ರಾವುತರಾವ್ ಬರೂರ ಡಿ.ಓ.ಸಿ. ಶ್ರೀ ವಿಶ್ವನಾಥಗೌಡ, ಡಿ.ಓ. ಹಾಗೂ ಸ್ಕೌಟ್ ಮಾಸ್ಟರ್ಸ್, ಗೈಡ್ ಕ್ಯಾಪ್ಟನ್ನರು ಭಾಗವಹಿಸಿದ್ದರು.

## ತುಮಕೂರು



ತುಮಕೂರು ಚಿ॥ ನಿಹಾಲ್ ಜೆ. ಇವರು ಚತುರ್ಥ ಚರಣ್ ಕಬ್ ಆಗಿದ್ದು ಅನೇಕ ಸ್ಪರ್ಧೆಗಳಲ್ಲಿ ಭಾಗವಹಿಸಿ ಪುರಸ್ಕಾರಗಳನ್ನು ಪಡೆದಿರುತ್ತಾರೆ.

ದಿನಾಂಕ 14-11-2016 ರಂದು ನಡೆದ ಮಕ್ಕಳ ದಿನಾಚರಣೆ ಸಂದರ್ಭದಲ್ಲಿ ಘನತೆವೆತ್ತ ರಾಷ್ಟ್ರಪತಿಗಳಾದ ಶ್ರೀ ಪ್ರಣಬ್ ಮುಖರ್ಜಿಯವರು "ರಾಷ್ಟ್ರೀಯ ಬಾಲ ಪುರಸ್ಕಾರ" ವನ್ನು ಚಿ॥ ನಿಹಾಲ್‌ಗೆ ರಾಷ್ಟ್ರಪತಿ ಭವನದಲ್ಲಿ ನೀಡಿದರು.

## ಜಾಂಬೂರಿ

**ಕರೆಯುತಿದೆ ಕರೆಯುತಿದೆ ಕೈಬೀಸಿ ಕರೆಯುತಿದೆ.**
**17ನೇ ಜಾಂಬೂರಿಗೆ ಬಾ ಎಂದು ಕರೆಯುತಿದೆ.**
**ಸಂಸ್ಕೃತಿ ನಗರಿಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಹಬ್ಬದ ಸಡಗರ ನೋಡು ಬಾ ಎನ್ನುತಿದೆ.**

**ಸ್ಕೌಟ್ಸ್-ಗೈಡ್ಸ್ ಇತಿಹಾಸಪುಟದಲಿ ಸೇರುವ ಜಾಂಬೂರಿ ಇದಾಗಿದೆ.**
**ಜೀವನದ ಸ್ಮರಣೀಯವಾಗಿ ಉಳಿಯುವ ಜಾಂಬೂರಿ ಇದಾಗಿದೆ**
**ವಿವಿಧ ಭಾಷೆ, ವಿವಿಧ ಜಾತಿ ಭೇದ ಭಾವ ವಿಲ್ಲದ ಜಾಂಬೂರಿ ಇದು.**

**ಹಿರಿಯ, ಕಿರಿಯ, ಎನ್ನದೇ ಸಹೋದರಿಯರ ಭ್ರಾತೃತ್ವ ಇದಾಗಿದೆ**
**ಕಬ್ಸ್, ಬುಲ್-ಬುಲ್‌ಗಳ ಕಲರವ ಸಂಗಮ ಇದಾಗಿದೆ.**
**ಮುಕ್ತ ದಳಗಳ ಮಕ್ಕಳ ಜಾಂಬೂರಿ ನೋಡುವ ಅವಕಾಶವಿದೆ.**

**ಛಳಿಮಳೆ ಬೀಳಲಿ ಬಿಸಲು ಎನ್ನದೆ ಟೆಂಟಿನವಾಸ ಸಂತಸ ತಂದಿದೆ**
**ಕಣ್ಣಿನ ಕಣ್ಮಣಿ ಮಿನುಗುವ ತಾರೆಯಂತಿದೆ ಈ ಜಾಂಬೂರಿ**
**ರಾಜ್ಯ, ರಾಷ್ಟ್ರಗಳ ಎಲ್ಲರ ಸೇವೆ ಇಲ್ಲಿ ದೊರೆಯುತಿದೆ.**

**ಮಾರ್ಚ್ ಫಾಸ್ಟ್, ರೂಟ್ ಮಾರ್ಚ್, ಫೋಕ್ ಡ್ಯಾನ್ಸ್ ಇಲ್ಲಿದೆ**
**ಹೈಕ್, ಫನ್‌ಗೇಮ್, ಸಾಹಸ ಚಟುವಟಿಕೆ ಮಸ್ತ್ ಮಜಾಮಾಡಿ ಎನ್ನುತಿದೆ.**
**"ಉತ್ತಮ ಭವಿಷ್ಯದತ್ತ ಸಮಸ್ತರೂ ಸೇರೋಣ" ಎಂದು ಕೈಬೀಸಿ ಕರೆಯುತಿದೆ.**

**ಕು॥ ಮಿನಾಜ ಅ. ಸೂರಣಗಿ,** ಗೈಡ್
7ನೇ ತರಗತಿ ಸೆಂಟ್ ಆ್ಯನ್ಸ್, ಹಾವೇರಿ

## 'ಜಾಂಬೂರಿ ಜಯ ಗೀತೆ'

ಜಾಂಬೂರಿ ಜಾಂಬೂರಿ ಎಲ್ಲೆಲ್ಲೂ
ಬಾರಿ ಬಾರಿ ತಯಾರಿ ಸ್ಕೌಟ್ ಗೈಡ್
ಸಮವಸ್ತ್ರದಲಿ ಶಿಸ್ತಿನ ಸಿಪಾಯಿಗಳು
ಸೇರುವರು ಕರುನಾಡಿನಲಿ.॥

ತೋರುತಿಹರು ಸಂಸ್ಕೃತಿ ಸಾಹಿತ್ಯವನು
ತರ ತರ ಕೌಶಲ್ಯ ಕಲೆಗಳನು
ಮಾಡುತಿಹರು ಮನಮುಟ್ಟಿ
ಪ್ರತಿಭೆ ಪ್ರದರ್ಶನಗಳನು.

ಸವಿಯಲಿಹರು ಭೂರಿ ಭೋಜನಗಳನು
ನಲಿದು ಕುಣಿದು ಕುಪ್ಪಳಿಸಿ
ಪಡೆವರಿವರು ಸಂತಸವನು
ಸಾಂಸ್ಕೃತಿಕ ನಗರಿ ಮೈಸೂರಿನಲಿ.

ಏರಿ ಇಳಿಯುತಿಹರು ಸಾಹಸದಾಟದಲಿ
ಕಲಿಯುವರು ಜೀವನ ಮೌಲ್ಯಗಳನು
ಇವರಿಗಾಗಿಹರು ಸಾವಿರಾರು ಶಿಕ್ಷಕರು
ತೋರುತಿಹರು ದಾರಿ ದೀವಿಗೆಯನು.

ಇವರ ಸ್ನೇಹದ ಮೇಳಕೆ ಬರುತಿಹರು
ಭಾರತದ ರಾಷ್ಟ್ರಾಧ್ಯಕ್ಷರು ಕೋರುತಿಹರು
ಶುಭವನು ಸ್ಕೌಟ್ಸ್ ಮತ್ತು ಗೈಡ್ಸ್
ಉತ್ತಮ ನಾಗರೀಕರಾಗಲೆಂದು.

ಒಟ್ಟಾಗಿ ನಡೆಯಲೆಂದು ಉತ್ತಮ ಭವಿಷ್ಯತ್ತಿಗಾಗಿ
ಸಾರುತಿಹರು ಶಾಂತಿ ಐಕ್ಯತೆಯ ಸಂದೇಶವನು
ವಿಶ್ವದೆಲ್ಲೆಡೆ ಮೊಳಗಲಿ ಜಾಂಬೂರಿಯ ಜಯಗೀತೆ

**ಮಂಜುಳ.ಸಿ**
**ರಾಜ್ಯ ಸಂಘಟನಾ ಆಯುಕ್ತರು (ಗೈ)**
**ಕರ್ನಾಟಕ**

## ಮಲ್ಲಿಗೆ

ದುಂಡು ಮಲ್ಲಿಗೆ
ನೀನು ಎಲ್ಲಿಗೇ ?
ಮಲ್ಲಿಗೆ ಮುಡಿದವರ ತಲೆಗೆ,
ಸುಮ ಬಾಲೆಯ ಮುಡಿಗೆ
ಘಮಘಮಿಸಿ ನಲ್ಲೆಯು
ನಡೆದಳು ಮೈಸೂರಿಗೆ

ನೇರಿಗೆ ಪದರು ಪದುರಾಗಿ
ಸೀರಿಯು ರೇಷ್ಮೆ ರೇಷ್ಮೆಯಾಗಿ
ಹೆಜ್ಜೆ ಗೆಜ್ಜೆ ಮೈಸೂರಿನ ಉಷೆಯಾಗಿ;
ಮೆರೆದಳು ಮಹಾರಾಣಿಯಾಗಿ,
ನಾಟ್ಯವಾಡಿದಳು ನೈದಿಲೆಯಾಗಿ
ಕೈ ಮಾಡಿ ಕರೆದಳು ತಾಯಿಯಾಗಿ

ಬಂದಿತು ಮಹಾ ಸಮೂಹವದು;
ಸ್ಕೌಟರ್ಸ್ ಗೈಡರ್ಸ್ ರೋವರ್ ರೇಂಜರದು
ಸಮವಸ್ತ್ರ ವಿನ್ಯಾಸಗಳು ನೋಡಲದು
ನೇತ್ರಗಳಿಗೆ ಆನಂದದ ಹಬ್ಬವದು,
ಕೆಂಪು ಸೊಂಪಿನ ಹಂದರವದು

ಪೂರ್ವದಿಂದ ಪಶ್ಚಿಮಕ್ಕೆ,
ಉತ್ತರದಿಂದ ದಕ್ಷಿಣಕ್ಕೆ
ಸಾಗರದಡಿಗಳಿಂದ ಅಲೆಗಳು
ಉಕ್ಕಿ ಉಕ್ಕಿ ಹರಿದವು
ಸಂತೋಷದಿಂದ ಕುಣಿದವು
ಹಕ್ಕಿಗಳ ಸಾಲು ಸಾಲು

ಹಸಿರು ನಾಡಾಯಿತು ಕರ್ನಾಟಕ
ಕೆಂಪು ಹಳದಿ ಕೇತವ ಹಾರಿ
ನೀಲಿ ರಂಗಿನ ಭ್ರಾತೃಭಾವದಿ ವಿಶ್ವವೆಲ್ಲಾ ಮೆರೆಯಿತು
ಸ್ಕೌಟರ್ಸ್-ಗೈಡರ್ಸ್ ಕಬ್ಸ್ ಬುಲ್ ಬುಲ್ಸ್ ವೈಭವದಿ

**ಶ್ರೀಮತಿ ಜ. ಸದಮಲ**
ಶಿಕ್ಷಕಿ ಎನ್. ಎಫ್, ಹಿರಿಯ ಪ್ರಾಥಮಿಕ ಶಾಲೆ
ಬೀದರ

# 17TH NATIONAL JAMBOREE OF SCOUTS AND GUIDES

Adakanahalli Industrial Area, Nanjanagudu Road, Mysuru. from 29 December 2016 to 04 January 2017

## INAUGURAL FUNCTION OF NATIONAL JAMBOREE

29th December 2016, Thursday - Time: 3.15 P.M.

**SRI PRANAB MUKHERJEE**
His Excellency the President of India
has graciously consented to Inaugurate the Jamboree

**SRI VAJUBHAI RUDABHAI VALA**
His Excellency the Governor of Karnataka
has kindly consented to be the Chief Guest

**SRI SIDDARAMAIAH**
Hon'ble Chief Minister of Karnataka
has kindly agreed to Preside

**SRI ANANTH KUMAR**
Hon'ble Minister of Chemicals & Fertilizers
& Parliamentary Affairs, Government of India

**SRI VIJAY GOEL**
Hon'ble Minister of State for Youth Affairs & Sports
Government of India

**DR. H.C. MAHADEVAPPA**
Hon'ble Minister for Public Works
Government of Karnataka

**SRI TANVEER SAIT**
Hon'ble Minister for Wakf, Primary & Secondary Education
Government of Karnataka

**DR. PRAMODA DEVI WODEYAR**
H.H. Maharani of Mysuru

**DR. ANIL KUMAR JAIN**
President, Bharat Scouts & Guides, India

**SRI B.I. NAGARALE, I.A.S. (Retd.)**
Chief National Commissioner
Bharat Scouts and Guides, India

**SRI P.G.R. SINDHIA**
State Chief Commissioner
Bharat Scouts and Guides, Karnataka

have kindly agreed to participate as Guests of Honour

Note: Please Confirm your Presence to this Programme in advance. Need to be present & to occupy the Chairs before 2.45 P.M. Don't Carry Mobile and Bags to the Programme Place. Please Stand up for the National Anthem in the Beginning and End of the Programme. Do not move once Programme starts until the Programme Ends.

## VALEDICTORY FUNCTION OF NATIONAL JAMBOREE

3rd January 2017, Tuesday - Time : 2.45 P.M.

**SRI H.D. DEVE GOWDA**
Former Hon'ble Prime Minister of India
has kindly consented to be the Chief Guest & deliver Valedictory Address

**SRI SIDDARAMAIAH**
Hon'ble Chief Minister of Karnataka
has kindly agreed to Preside

**SRI D.V. SADANANDA GOWDA**
Hon'ble Minister of Statistics & Programme Implementation, Govt. of India

**SRI DIGVIJAY SINGH**
Former Hon'ble Chief Minister of Madhya Pradesh
Hon'ble Member of Parliament & General Secretary- AICC

**SRI MALLIKARJUN KHARGE**
Hon'ble Leader of the Congress Party - Lok Sabha

**SRI VIJAY GOEL**
Hon'ble Minister of State for Youth Affairs & Sports, Govt. of India

**SRI RAMESH CHANDAPPA JIGAJINAGI**
Hon'ble Minister of State of Drinking Water & Sanitation, Govt. of India

**SRI D.K. SHIVA KUMAR**
Hon'ble Minister for Energy, Govt. of Karnataka

**SRI K.J. GEORGE**
Hon'ble Minister for Bengaluru Development & Urban Planning
Government of Karnataka

**DR. H.C. MAHADEVAPPA**
Hon'ble Minister for Public Works, Govt. of Karnataka

**SRI H.S. MAHADEVA PRASAD**
Hon'ble Minister for Co-Operation & Sugar, Govt. of Karnataka

**SRI U.T. KHADER**
Hon'ble Minister for Food & Civil Supplies & Consumer Affairs
Government of Karnataka

**SRI B.I. NAGARALE, I.A.S. (Retd.)**
Chief National Commissioner, Bharat Scouts and Guides, India

**P. Vishwanath**
Secretary General, Jamboree Council

**DR. CHELLA KUMAR**
Secretary, All India Congress Committee
have kindly agreed to participate as Guests of Honour

# ‘ಹಸುರು’ ವಸ್ತುಗಳನ್ನೇ ಖರೀದಿಸಿ ಮಾಲಿನ್ಯ ನಿಯಂತ್ರಣಕ್ಕೆ ಸಹಕರಿಸಿ

ಹಸುರು ಬದುಕಿನಲ್ಲಿ ಖುಷಿಯಿದೆ; ನೆಮ್ಮದಿ ಇದೆ. ಈ ಭೂಮಿಗೆ ರಕ್ಷಣೆ ಇದೆ

## ಏನಿದು ಹಸುರು ಬಳಕೆ?

- ನಮ್ಮ ನಿತ್ಯ ಜೀವನದ ಅಗತ್ಯಗಳಿಗಾಗಿ ದಿನವೂ ಏನೆಲ್ಲ ಖರೀದಿಸುತ್ತೇವೆ.. ಆಹಾರ ಪದಾರ್ಥಗಳು, ಮನೆ ಬಳಕೆಯ ವಸ್ತುಗಳು, ಉಡುಗೆ-ತೊಡುಗೆಗಳು, ಸಾಧನ ಸಲಕರಣೆಗಳು, ವಾಹನಗಳು, ಗ್ರಾಹಕ ಬಳಕೆಯ ಉತ್ಪನ್ನಗಳು... ಇವೆಲ್ಲವೂ ಬಳಕೆಯಾದ ಮೇಲೆ ಎಲ್ಲಿಗೆ ಹೋಗುತ್ತವೆ? ಒಮ್ಮೆ ಯೋಚಿಸಿ. ಮರುಬಳಕೆಯಾಗಿಯೋ, ವಿಷ ಉಣಿಸದೆ ನೆಲದಲ್ಲಿ ಕರಗಿಯೋ ಇವೆಲ್ಲ ವಸ್ತುಗಳೂ ವಿಲೇವಾರಿ ಆಗುವಂತಿದ್ದರೆ ಎಷ್ಟು ಚೆನ್ನಾಗಿರುತ್ತದೆ ಅಲ್ಲವೆ? ಹೀಗೆ ಮಾಲಿನ್ಯವನ್ನು ನಿಯಂತ್ರಿಸುವ, ಪರಿಸರ ರಕ್ಷಿಸುವ, ನಮ್ಮ ಆರೋಗ್ಯವನ್ನೂ ಕಾಪಾಡುವ ಹಾಗೆ ಬದುಕನ್ನು ರೂಪಿಸಿಕೊಳ್ಳುವುದೇ ಹಸುರು ಬಳಕೆ.

## ಹಸುರು ಬದುಕಿಗೆ ನೀವೇನು ಮಾಡಬೇಕು?

- ಪ್ರತಿದಿನ ಖರೀದಿಗೆ ಮನೆಯಿಂದ ಹೊರಡುವಾಗಲೇ ಏನು ಬೇಕು ಎಂಬುದನ್ನು ಪಟ್ಟಿ ಮಾಡಿಕೊಳ್ಳಿ; ವಸ್ತುಗಳನ್ನು ತರಲು ಬಟ್ಟೆಯ ಚೀಲವನ್ನು ಇಟ್ಟುಕೊಂಡೇ ಹೊರಡಿ.
- ಖರೀದಿ ಮಾಡುವಾಗ ದೊಡ್ಡ ಅಥವಾ ಮರುಬಳಕೆ ಮಾಡಬಹುದಾದ ಪ್ಯಾಕುಗಳನ್ನೇ ಖರೀದಿಸಿ.
- ಸ್ಥಳೀಯ ತರಕಾರಿ, ದಿನಸಿ ಉತ್ಪನ್ನಗಳನ್ನೇ ಖರೀದಿಸಿ; ಸರಕು ಸಾಗಾಟ ಕಡಿಮೆ ಮಾಡಿದಷ್ಟೂ ಪರಿಸರಕ್ಕೆ ಉತ್ತಮ.
- ನಿತ್ಯಜೀವನದಲ್ಲಿ ರಾಸಾಯನಿಕಗಳ ಬಳಕೆ ಕಡಿಮೆ ಮಾಡಿ. ಬದಲಿಗೆ, ಈಗ ಮಾರುಕಟ್ಟೆಯಲ್ಲಿ ಸಿಗುವ ನೂರಾರು ನಿಸರ್ಗದತ್ತ ಉತ್ಪನ್ನಗಳನ್ನು ಆಯ್ಕೆ ಮಾಡಿಕೊಳ್ಳಿ
- ಜೈವಿಕ ಇಂಧನದ ಬಳಕೆಗಾಗಿ ನೀವೂ ಮುಂದಾಗಿ; ಪಾಳು ಜಾಗದಲ್ಲಿ, ಬೀದಿ ಬದಿಯಲ್ಲಿ ಜೈವಿಕ ಇಂಧನ ಕೊಡುವ ಗಿಡಮರಗಳನ್ನು ಬೆಳೆಯಿರಿ.
- ಆದಷ್ಟೂ ಪ್ಲಾಸ್ಟಿಕ್ ಬಳಕೆಯನ್ನು ತಗ್ಗಿಸಿ; ತ್ಯಾಜ್ಯಗಳನ್ನು ಮರುಬಳಕೆಗೆ ಕೊಡಿ.
- ಕಚೇರಿಯಲ್ಲಿ ಕಾಗದದ ಬಳಕೆಯನ್ನು ಮಿತಗೊಳಿಸಿ. ಪ್ರಿಂಟ್ ತೆಗೆಯಲೇ ಬೇಕಾದಾಗ ಎರಡೂ ಬದಿ ಬಳಸಿ.
- ಮನೆ-ಕಚೇರಿಗಳಲ್ಲಿ ವಿದ್ಯುತ್ ಬಳಕೆ ನಿಯಂತ್ರಿಸಿ; ಸಿಎಫ್ಎಲ್/ಎಲ್ಇಡಿ ಬಲ್ಬುಗಳನ್ನು ಬಳಸಿ. ಸ್ನಾನಕ್ಕಾಗಿ ಸೌರ ಶಕ್ತಿಯ ವಾಟರ್ ಹೀಟರ್ ಬಳಸಿ.
- ಮನೆಯ, ಕಚೇರಿಯ ಕಸವನ್ನು ವಿಂಗಡಿಸಿ, ಮರುಬಳಕೆಗೆ ಕೊಡಿ. ಗ್ರಾಹಕರಾದ ನಾವು ಕಸವನ್ನೂ ನಿರ್ವಹಣೆ ಮಾಡಿದಾಗಲೇ ಹಸುರು ಬಳಕೆದಾರರಾಗುತ್ತೇವೆ!

ಹಸುರು ಖರೀದಿ
ಸಂಸ್ಕೃತಿ ಬೆಳೆಸಿಕೊಳ್ಳೋಣ.

ಕೊಳ್ಳುಬಾಕ ಪ್ರವೃತ್ತಿಗೆ
ಕಡಿವಾಣ ಹಾಕೋಣ.

ನಿಸರ್ಗದೊಂದಿಗೆ
ಸಹಬಾಳ್ವೆ ನಡೆಸೋಣ

ಪರಿಸರ ಮಾಲಿನ್ಯಕ್ಕೆ
ವಿದಾಯ ಹೇಳೋಣ!

ಮಂಡಳಿಯ ಫೇಸ್‌ಬುಕ್
ಪುಟಕ್ಕೆ ಭೇಟಿ ನೀಡಿ
www.facebook.com/
kspcbofficial



ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಕಟಿಸಿದವರು

**ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ**

ಪರಿಸರ ಭವನ, ಚರ್ಚ್ ಸ್ಟ್ರೀಟ್, ಬೆಂಗಳೂರು 560001

www.kspcb.gov.in

Regd. as News Paper (Magazine) RNI No: 13348/1959. Postal Regd. No. KA/BGGPO/2580/2015-17
Permitted to Post under WPP System Vide No.: WPP-340, Date of Publishing 28th of Every Month
Posted at: Bengaluru PSO, Mysore Road, Bengaluru-26 on 28 or 30 every Month (No. of Pages: 04+20 = 24)



Scouts-Guides & Rovers-Rangers of Karnataka State with Adult Leaders who Received National Award from President of India on 5th December in front of Rashtrapathi Bhavan. Sri Kondajji B. Shanmukhappa, Vice-President, Sri M.M. Londe, DCC, Dharwad and Family Members of Awardees are seen.



Mr. A.N. Mahesh, Dist. Commissioner(S) has been nominated as chairman of Jungle Lodges and Resorts Karnataka. Members of Chikkamagaluru Dist. Association felicitated him at District Association Office on this Happy Occasion.



ನವೆಂಬರ್ 7 ರಂದು ಧ್ವಜ ದಿನಾಚರಣೆ ಅಂಗವಾಗಿ ಶ್ರೀಮತಿ ಯಶೋದ ಶ್ರೀನಿವಾಸ್, ಮಹಾಪೌರರು, ತುಮಕೂರು ಮಹಾನಗರ ಪಾಲಿಕೆ ಇವರು ಧ್ವಜ ಚೀಟಿಗಳನ್ನು ಬಿಡುಗಡೆಮಾಡಿದರು. ಶ್ರೀಮತಿ ಆಶಾ ಪ್ರಸನ್ನ ಕುಮಾರ್, ಡಿ.ಸಿ.ಸಿ., ಶ್ರೀ ವೇಣುಗೋಪಾಲ ಕೃಷ್ಣ, ಡಿ.ಸಿ.(ಸ್ಕೌ), ಶ್ರೀ ಸುರೇಂದ್ರ ಷಾ, ಜಿಲ್ಲಾ ಕಾರ್ಯದರ್ಶಿ, ಶ್ರೀ ಬಿ.ಟಿ. ಸಿಂಧಗೀಕರ, ಡಿ.ಟಿ.ಸಿ., ಶೀ ಕೆ.ಎಸ್. ಚಂದ್ರಶೇಖರ್, ಡಿ.ಓ.ಸಿ ಹಾಗೂ ಇತರರು ಚಿತ್ರದಲ್ಲಿದಾರೆ.




ಹಾಸನ ಜಿಲ್ಲೆ ಅರಸೀಕೆರೆಯಲ್ಲಿ ನವೆಂಬರ್ 5 ರಂದು ಜರುಗಿದ ತಾಲ್ಲೂಕು ಮಟ್ಟದ 6ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ರೋವರ್ಸ್ ರೇಂಜರ್ಸ್, ಸ್ಕೌಟ್ಸ್-ಗೈಡ್ಸ್‌ಗಳು ಪಥಚಲನದಲ್ಲಿ ಭಾಗವಹಿಸಿದರು.



If not delivered, please return to :
**THE EDITOR, Karnataka Scout & Guide**
State Headquarters, Shanthi Gruha
#39, Palace Road, Bengaluru - 560 001
Ph.: 080-22260017
e-mail.: shq@bsgkarnataka.org
editor@bsgkarnataka.org
www.bsgkarnataka.org

**5.SRI.KONDAJJI.B.SHANMUKHAPPA**
Vice-President
Bharat Scouts and Guides, Karnataka
'Nagashree', # 23, 14th 'A' Cross
2nd Stage, 2nd Phase
West of Chord Road
Mahalakshimipuram
Bangalore-560086.

**Published by : The Bharat Scouts & Guides, Karnataka, State Headquarters**
Shanthi Gruha, #39, Palace Road, Bengaluru - 560 001. **Publisher & Editor : Siddaiah**, IAS (Retd.)
**Printed by : L. Lingappa, M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bengaluru-26